

# ಕನ್ನಡ ವಿಶ್ವವಿದ್ಯಾಲಯ

# ಎಚ್.ಎಲ್.ನಾಗೇಗೌಡರ 'ಸೊನ್ನೆಯಿಂದ ಸೊನ್ನೆಗೆ': ಒಂದು ಜಾನಪದೀಯ ಅಧ್ಯಯನ

೨೦೦೭-೦೮ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

ಮಾರ್ಗದರ್ಶಕರು

**ಪ್ರೊ. ಸುಧಾಕರ**
ನಿವೃತ್ತ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ

ಸಂಶೋಧಕಿ

**ಎಲ್. ಶೋಭಾ**
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು



೨೦೦೭-೦೮
ಕನ್ನಡ ವಿಶ್ವವಿದ್ಯಾಲಯ, ಹಂಪಿ



# ಕನ್ನಡ ವಿಶ್ವವಿದ್ಯಾಲಯ

# ಎಚ್.ಎಲ್.ನಾಗೇಗೌಡರ 'ಸೊನ್ನೆಯಿಂದ ಸೊನ್ನೆಗೆ' : ಒಂದು ಜಾನಪದೀಯ ಅಧ್ಯಯನ

೨೦೦೭-೦೮ನೇ ಸಾಲಿನ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ

*ಮಾರ್ಗದರ್ಶಕರು*


**ಪ್ರೊ. ಸುಧಾಕರ**
ನಿವೃತ್ತ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ


*ಸಂಶೋಧಕಿ*


**ಎಲ್.ಶೋಭಾ**
ಕನ್ನಡ ಎಂ.ಫಿಲ್ ವಿದ್ಯಾರ್ಥಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು



೨೦೦೭-೦೮
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ದೃಢೀಕರಣ ಪತ್ರ

೨೦೦೭-೦೮ನೇ ಸಾಲಿನಲ್ಲಿ ಎಲ್.ಶೋಭಾ ಎಂಬ ಎಂ.ಫಿಲ್. ವಿದ್ಯಾರ್ಥಿಯು ಈ ಪರೀಕ್ಷೆಯ ಅಂಗವಾಗಿ **ಎಚ್.ಎಲ್.ನಾಗೇಗೌಡ ಅವರ 'ಸೊನ್ನೆಯಿಂದ ಸೊನ್ನೆಗೆ' : ಒಂದು ಜಾನಪದೀಯ ಅಧ್ಯಯನ** ಎಂಬ ವಿಷಯ ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಇದನ್ನು ಇವರು ಈ ಮೊದಲು ಯಾವುದೇ ಬಗೆಯ ಪದವಿ. ಡಿಪ್ಲೋಮಾ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲ ಎಂದು ದೃಢೀಕರಿಸುತ್ತೇನೆ.

ಸಹಿ/

ಸ್ಥಳ: ಮೈಸೂರು
ದಿನಾಂಕ:೦೮-೦೬-೨೦೦೮

ಪ್ರೊ.ಸುಧಾಕರ,
ನಿವೃತ್ತ ಕನ್ನಡ ಪ್ರಾಧ್ಯಾಪಕರು,
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,
ಮಾನಸ ಗಂಗೋತ್ರಿ,
ಮೈಸೂರು.

# ಪ್ರಮಾಣಪತ್ರ

**"ಎಚ್.ಎಲ್.ನಾಗೇಗೌಡರ 'ಸೊನ್ನೆಯಿಂದ ಸೊನ್ನೆಗೆ' : ಒಂದು ಜಾನಪದೀಯ ಅಧ್ಯಯನ"** ಎಂಬ ವಿಷಯದ ಸಂಶೋಧನ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಯ ಕ್ರಮಸಂಖ್ಯೆ KVTM - ೦೦೧೪೨ರ ವಿದ್ಯಾರ್ಥಿಯಾದ ನಾನು ೨೦೦೭-೦೮ನೇ ಸಾಲಿನ ಪರೀಕ್ಷೆಗಾಗಿ **ಪ್ರೊ. ಸುಧಾಕರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಈ ನಿಬಂಧವನ್ನು ಯಾವುದೇ ಬಗೆಯ ಪದವಿ, ಡಿಪ್ಲೊಮಾ ಅಥವಾ ಪ್ರಶಸ್ತಿಗಾಗಿ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಎಲ್.ಶೋಭಾ

**(ಎಲ್.ಶೋಭಾ)**
೨೦೦೭-೦೮ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು

ಮೈಸೂರು
ದಿನಾಂಕ: ೧೫-೦೯-೨೦೦೮

## ಪರಿವಿಡಿ

# ಎಚ್.ಎಲ್.ನಾಗೇಗೌಡರ 'ಸೊನ್ನೆಯಿಂದ ಸೊನ್ನೆಗೆ' : ಒಂದು ಜಾನಪದೀಯ ಅಧ್ಯಯನ

*****

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಜಾನಪದ ಒಂದು ಜೀವನ ವಿಧಾನ. ಈ ಜೀವನ ವಿಧಾನದಲ್ಲಿ ನಂಬಿಕೆ, ಸಂಪ್ರದಾಯ ಆಚರಣೆಗಳಿರುತ್ತವೆ. ಸಾಹಿತ್ಯ ಜೀವನ ವಿಧಾನವನ್ನು ವಿವರಿಸುವ ಅಭಿವ್ಯಕ್ತಿ-ಯಾಗಿದೆ. ಇದನ್ನು ಗಮನಿಸಿದಾಗ ಜಾನಪದ ಮತ್ತು ಸಾಹಿತ್ಯಗಳ ಪರಸ್ಪರ ಸಂಬಂಧದ ಗಾಢತೆಯ ಅರಿವಾಗುತ್ತದೆ. ಅಲ್ಲದೆ ಜಾನಪದೀಯ ಅಧ್ಯಯನಕ್ಕೆ ಭದ್ರವಾದ ನೆಲೆಗಟ್ಟು ದೊರಕಿದಂತಾಗುತ್ತದೆ. ಮನುಷ್ಯ ಪ್ರವೃತ್ತಿ ಮೂಲಭೂತವಾಗಿ ಜಾನಪದೀಯವಾಗಿರು-ವುದರಿಂದ ಶಿಷ್ಟ ಸಾಹಿತ್ಯದಲ್ಲಿ ಕೆಲವಾದರೂ ಜಾನಪದ ಅಂಶಗಳು ಇದ್ದೇ ಇರುತ್ತವೆ. ಶಿಷ್ಟ ಸಾಹಿತ್ಯ ಮತ್ತು ಜಾನಪದ ಸಂಬಂಧ ಕೇವಲ ಸಾಹಿತ್ಯದ ಸಂಬಂಧವಾಗಿರದೆ, ಒಟ್ಟು ಸಂಸ್ಕೃತಿಯ ಸಂಬಂಧವಾಗಿದೆ. ಶಿಷ್ಟ ಸಾಹಿತ್ಯದಲ್ಲಿರುವ ಜಾನಪದೀಯ ಅಂಶಗಳ ವಿಶ್ಲೇಷಣೆ-ಯಾಗಬೇಕು. ಜನಪದ ಸಾಹಿತ್ಯ ಮತ್ತು ಜಾನಪದೀಯ ನೆಲೆಗಳು ಶಿಷ್ಟ ಸಾಹಿತ್ಯದಲ್ಲಿ ಯಾವ ಪ್ರಮಾಣದಲ್ಲಿ ಕೆಲಸ ಮಾಡಿವೆ ಎಂಬುದು ನಾವೀಗ ತಿಳಿಯಬೇಕಾಗಿರುವ ಅಂಶವಾಗಿದೆ.

'ಜನವಾಣಿ ಬೇರು, ಕವಿವಾಣಿ ಹೂವು' ಎಂಬ ಬಿ.ಎಂ.ಶ್ರೀಯವರ ಮಾತಿನಲ್ಲಿ ಶಿಷ್ಟ ಸಾಹಿತ್ಯದ ಮೇಲಾದ ಜನಪದ ಸಾಹಿತ್ಯದ ಪ್ರೇರಣೆ, ಪ್ರಭಾವಗಳನ್ನು ಗುರುತಿಸಬಹುದು. ತನ್ನ ಎಲ್ಲ ಕಸುವನ್ನು ಧಾರೆಯೆರೆದ ಜನಪದ ಸಾಹಿತ್ಯ ಶಿಷ್ಟ ಸಾಹಿತ್ಯದಲ್ಲಿ ಯಾವ ಸ್ವರೂಪವನ್ನು ಪಡೆದಿದೆ ಎಂಬುದನ್ನು ದೀರ್ಘ ಪರಂಪರೆಯನ್ನು ಹೊಂದಿರುವ ಕನ್ನಡ ಸಾಹಿತ್ಯದ ಅವಲೋಕನದಿಂದ ತಿಳಿಯುವುದು ಕುತೂಹಲಕರವಾದ ಅಧ್ಯಯನವಾಗುತ್ತದೆ.

ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ನವೋದಯ ಸಂದರ್ಭ ರೂಪುಗೊಂಡು ವೈವಿಧ್ಯವನ್ನು ಪಡೆಯಿತು. ಅದರ ಹಿಂದೆ ಇರುವ ಜಾನಪದದ ಮಹತ್ತರವಾದ ಕೊಡುಗೆಯನ್ನು ಯಾರೂ ತಳ್ಳಿಹಾಕುವಂತಿಲ್ಲ. ಅಲ್ಲಿಯವರೆಗೆ ಅಂತರ್ವಾಹಿನಿ-ಯಾಗಿದ್ದ ಜಾನಪದ ತನ್ನೆಲ್ಲ ಗುಣಲಕ್ಷಣ ಸ್ವರೂಪಗಳೊಂದಿಗೆ ಬಹಿರಂಗವಾಗಿ ಕಾಣಿಸಿ-ಕೊಂಡಿತು. ವಿಶಿಷ್ಟ ಸಂವೇದನೆ, ಸಂಸ್ಕಾರದಿಂದ ಕೂಡಿದ ಅನ್ಯ ಪ್ರಭಾವಗಳನ್ನು ಕನ್ನಡ ಭಾಷೆಯ ಸಂಸ್ಕೃತಿಯ, ಜಾಯಮಾನಕ್ಕೆ ಅನುಗುಣವಾಗಿ ಒಗ್ಗಿಸಿಕೊಳ್ಳಬೇಕಾದ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಲುಕಿ ತೊಳಲಾಡಿದ ನವೋದಯ ಸಂಪ್ರದಾಯದ ಕವಿಗಳಿಗೆ ಜಾನಪದ ತವನಿಧಿಯಾಗಿ ಕಂಡದ್ದರಲ್ಲಿ ಆಶ್ಚರ್ಯವಿಲ್ಲ. ನವೋದಯ ಲೇಖಕರಿಗೆ ಗ್ರಾಮೀಣ ಜೀವನ ಪ್ರೇರಣೆ, ಪ್ರಭಾವವನ್ನು ಒದಗಿಸಿ ಸಾಹಿತ್ಯ ಸಂಮೃದ್ಧವಾಗಲು ಕಾರಣವಾಯಿತು. ಗೊರೂರು ರಾಮಸ್ವಾಮಿ ಅಯ್ಯಂಗಾರ್, ಕೆ.ವಿ.ಪುಟ್ಟಪ್ಪ, ಬೆಟಗೇರಿಕೃಷ್ಣಶರ್ಮ, ಎ.ಎನ್.ಮೂರ್ತಿರಾವ್ ಮೊದಲಾದ ಸಾಹಿತಿಗಳು ತಮ್ಮ ಪ್ರಬಂಧಗಳಲ್ಲಿ ಗ್ರಾಮೀಣ ಜೀವನವನ್ನು ಕಂಡರಿಸಿದ್ದಾರೆ. ಬೇಂದ್ರೆ, ಚಂದ್ರಶೇಖರ ಕಂಬಾರ, ಚನ್ನಣ್ಣವಾಲೀಕಾರ ಮೊದಲಾದವರು ತಮ್ಮ ಕಾವ್ಯಗಳಲ್ಲಿ ಜಾನಪದ ಭಾಷೆಯನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಜನಸಾಮಾನ್ಯರ ಬದುಕಿನಲ್ಲಿ

ಉತ್ತಮವಾದುದೂ ಇದೆ ಎಂಬ ಅಂಶವನ್ನು ಕಂಡುಕೊಂಡು ಅದರ ಸೊಗಡು, ಸೊಗಸು, ಸತ್ವ, ಖನಿಗಳನ್ನು ಸಂಪನ್ಮೂಲವಾಗಿ ಬಳಸಿಕೊಂಡು ಜನರ ಬದುಕಿನಿಂದ ದೂರವಾಗಿದ್ದ ಸಾಹಿತ್ಯವನ್ನು ಜನಮನದ ಹತ್ತಿರ ತರಲು ಪ್ರಯತ್ನಿಸಿ ಸಫಲರಾಗಿದ್ದಾರೆ.

ಇಂತಹ 'ಜಾನಪದ' ಎಂಬುದು ವಿಶಾಲವಾದ ಅರ್ಥದಲ್ಲಿ ಬಳಕೆಯಾಗಿದ್ದು ಒಂದು ಸಮುದಾಯದ ಆಚಾರ-ವಿಚಾರ, ಕ್ರೀಡೆ, ನೃತ್ಯ, ನಾಟಕ, ಅಡುಗೆ, ಉಡುಗೆ-ತೊಡುಗೆ, ವೈದ್ಯ, ಧಾರ್ಮಿಕ ಕ್ರಿಯೆಗಳು ಮೊದಲಾದ ಜೀವನ ವಿಧಾನಗಳನ್ನು ಒಳಗೊಳ್ಳುತ್ತದೆ. ''ಜಾನಪದ ಸಾಮಗ್ರಿಯಲ್ಲಿ ಜನಾಂಗದ ಸಂಪೂರ್ಣ ಜೀವನ ವಿಧಾನವೇ ಸಂಗ್ರಹವಾಗಿದೆ. ಈ ಸಂಗ್ರಹವನ್ನು ಮತ್ತೆ ಸಂಗ್ರಹಿಸಿ ಅದನ್ನು ತಿಳಿದುಕೊಳ್ಳಬೇಕಾಗಿರುವುದೇ ಈಗಿನ ಕೆಲಸ''[೧] ಎಂಬ ಉಕ್ತಿ ಜಾನಪದದ ವೈಶಿಷ್ಟ್ಯ ಏನು ಎಂಬುದನ್ನು ತಿಳಿಸುತ್ತದೆ.

''ಒಂದೊಂದು ಹಳ್ಳಿಯೂ ಒಂದೊಂದು ಕಾದಂಬರಿಗೆ ವಸ್ತು; ಒಂದೊಂದು ಕಥನಗೀತಕ್ಕೆ ಸೊತ್ತು. ಪಟ್ಟಣದ ಕಟ್ಟುಬಾಳಿನ ವರ್ಣನೆ ಮಾಡಿ, ಅದನ್ನೇ ಪುನಃ ಪುನಃ ಮಗುಚಿ ಹಾಕಿ ಹೇಳುವ ಸಾಹಿತ್ಯ ರಚನೆಯ ಜೊತೆಗೆ ಹಳ್ಳಿಯ ಹುಟ್ಟುಬಾಳಿನ ವರ್ಣನೆಗೆ ಕೈಹಾಕಿದರೆ ಬರೆಯುವ ಕೈಗಳು ಎಷ್ಟಾದರೂ ಸಾಲವು!........ ಹಳ್ಳಿಯಲ್ಲಿ ಎಷ್ಟೊಂದು ನುಡಿಗಳು! ಎಷ್ಟೊಂದು ನುಡಿಮುತ್ತುಗಳು! ಎಷ್ಟೊಂದು ನುಡಿಗಟ್ಟುಗಳು! ಎಷ್ಟೊಂದು ಗಾದೆಗಳು! ಇದನ್ನೆಲ್ಲ ಕಾಣುವ ಕಣ್ಣುಬೇಕು; ಮೆಚ್ಚುವ ಮನಸ್ಸು ಬೇಕು ಅಷ್ಟೆ''[೨]. ಎಂಬ ಅಭಿಪ್ರಾಯ ವಾಸ್ತವವಾಗಿಯೂ ಅರ್ಥಪೂರ್ಣ ಹಳ್ಳಿಗರ ಬದುಕನ್ನು ಜಾನಪದ ಅಧ್ಯಯನದ ಪ್ರಮುಖ ಸಾಮಗ್ರಿಯನ್ನಾಗಿ ಮಾಡಿಕೊಂಡು ಅಧ್ಯಯನ ಮಾಡಲು ವಿಫುಲ ಅವಕಾಶಗಳು ಇಂದೂ ಇದ್ದೇ ಇವೆ.

'ಸೊನ್ನೆಯಿಂದ ಸೊನ್ನೆಗೆ'-ಎಚ್.ಎಲ್.ನಾಗೇಗೌಡ ಅವರ ಎರಡನೆಯ ಕಾದಂಬರಿ. ಅವರ ಮೊದಲ ಕಾದಂಬರಿ 'ದೊಡ್ಡಮನೆ!' ಕೃತಿಕಾರರೇ ಹೇಳಿರುವಂತೆ ''ದೊಡ್ಡಮನೆ ಗ್ರಾಮೀಣ ಬಾಳಿನ ಒಂದು ಮುಖವನ್ನು ಚಿತ್ರಿಸಿದರೆ ಇದು (ಸೊನ್ನೆಯಿಂದ ಸೊನ್ನೆಗೆ) ಇನ್ನೊಂದು ಮುಖವನ್ನು ಚಿತ್ರಿಸುತ್ತದೆ''.[೩] ಕೃತಿಯ ಒಳಹೊಕ್ಕು ಹುದುಗಿರುವ ಜಾನಪದೀಯ ಅಂಶಗಳನ್ನು ಪ್ರತ್ಯೇಕಿಸಿದಾಗ ಇದೊಂದು ಜಾನಪದ ಸಂಗ್ರಹವಾಗಿ ಕಂಡಿತು. ಒಂದು ಗಾದೆ ಮಾತಿನಿಂದ ಪ್ರೇರಣೆ ಪಡೆದು ಅದನ್ನು ಕಾದಂಬರಿ ಮಾಡಿರುವುದು ಸಾಹಸದ ಮಾತೇ ಸರಿ. ಕಾದಂಬರಿ ಹುಟ್ಟಿಗೆ ಕಾರಣರಾದ ಅವರ ಮಿತ್ರರಾದ ಶ್ರೀಮಾನ್ ಕೆ.ಸಿ.ವೀರೇಗೌಡರನ್ನು ಲೇಖಕರು ನೆನೆದಿದ್ದಾರೆ.

---

೧. ಹಾ.ಮಾ.ನಾಯಕ, ಜಾನಪದ ಸ್ವರೂಪ, ೧೯೭೧, ಪು. ೩೦

೨. ಎಚ್.ಎಲ್.ನಾಗೇಗೌಡ, ''ನನ್ನೂರು'', ಪೀಠಿಕೆ.

೩. 'ಸೊನ್ನೆಯಿಂದ ಸೊನ್ನೆಗೆ', ಪೀಠಿಕೆ.

ಈ ನಿಬಂಧದಲ್ಲಿ ಜೀವನ ವಿಧಾನ, ಐತಿಹ್ಯ, ಧಾರ್ಮಿಕ ಆಚರಣೆ– ನಂಬಿಕೆಗಳು, ಭಾಷೆ, ಸಾಹಿತ್ಯ– ಅವುಗಳ ಉಪಾಂಗಗಳಾದ ಗಾದೆ, ಬೈಗುಳ, ವ್ಯಕ್ತಿನಾಮ, ಸ್ಥಳನಾಮ, ಪಡೆನುಡಿಗಳು ಮತ್ತು ನ್ಯಾಯಪದ್ಧತಿಗಳನ್ನು ಅಭ್ಯಸಿಸಲಾಗಿದೆ. ಇದು ಕಳೆದು ಹೋದ ಸಂಸ್ಕೃತಿಯ ಜಾನಪದೀಯ ಅಧ್ಯಯನವೂ ಹೌದು; ಪ್ರಸ್ತುತ ಜನಜೀವನದ ಸಂಸ್ಕೃತಿ ಅಧ್ಯಯನವೂ ಹೌದು. ಆಕರ್ಷಕವಾದ ಅಧ್ಯಯನ ವಿಷಯವಾದ ಜನಪದ ತನ್ನ ವಿನೂತನತೆ, ವ್ಯಾಪಕತೆಯಿಂದ ಎಲ್ಲರನ್ನೂ ಸೆಳೆಯುವಂತೆ ನಾನು ಅದರಲ್ಲಿ ಒಂದಾಗಿ, ಮನವೀಯ ಮೌಲ್ಯಗಳನ್ನು ಅರಿಯಲು, ಸಮಾಜದ ಬಗೆಗೆ ತಿಳಿಯಲು, ಜನಾಂಗದ ಬದುಕನ್ನು ಅರ್ಥಮಾಡಿಕೊಳ್ಳಲು ನೆರವಾಗಲು ಸಹಾಯಕವಾಗಿದೆ.

--

## ಅಧ್ಯಾಯ : ಎರಡು

# ಪ್ರವೇಶ: ಜಾನಪದ ಸ್ವರೂಪ ಮತ್ತು ಮಹತ್ವ

**ಜಾ**ನಪದ ಎಂಬುದು ವಿಶ್ವವಿಶಾಲವಾದುದು. ಹಲವು ಶಾಸ್ತ್ರಗಳಿಗೆ ತಾಯಿಬೇರು. ಸುಪ್ರಸಿದ್ಧ ಜಾನಪದ ವಿದ್ವಾಂಸ ಅಲೆನ್‌ಡಂಸೆಸ್ ಪ್ರಕಾರ "ಜೀವಂತ ಜನಪದದ ಸಮೃದ್ಧ ಉಗ್ರಾಣ ಭಾರತ". ಅದೇ ವಿದ್ವಾಂಸರು ಮುಂದುವರಿದು ಹೇಳುತ್ತಾರೆ: "ಭಾರತದಲ್ಲಿ ಜಾನಪದ ಸಂಶೋಧನೆಗಿರುವ ಅವಕಾಶಗಳು ಜಗತ್ತಿನಲ್ಲಿ ಅದ್ವಿತೀಯ" ಈ ಹೇಳಿಕೆ ಕರ್ನಾಟಕಕ್ಕೆ ವಿಶೇಷವಾಗಿ ಅನ್ವಯಿಸುತ್ತದೆ. ಇಲ್ಲಿ ಜನಪದ ಹೇರಳ ಮತ್ತು ವೈವಿಧ್ಯಪೂರ್ಣವಾಗಿದೆ. ಕನ್ನಡ ಸಾಹಿತ್ಯದಲ್ಲಿ ಅನೇಕ ನವೋದಯ ಲೇಖಕರಿಗೆ ಜಾನಪದ ಹೇರಳವಾದ ವಸ್ತುವನ್ನು ಒದಗಿಸಿದೆ. ಅನೇಕ ಪ್ರಾದೇಶಿಕ ಕಾದಂಬರಿಗಳು ಜಾನಪದೀಯ ಸೊಗಡನ್ನು ಹೀರಿಕೊಂಡು ಶ್ರೀಮಂತವಾಗಿವೆ. ಉದಾಹರಣೆಗೆ ರಾವ್‌ಬಹದ್ದೂರರ ಗ್ರಾಮಾಯಣ, ಕೆ.ವಿ.ಪುಟ್ಟಪ್ಪನವರ ಮಲೆಗಳಲ್ಲಿ ಮದುಮಗಳು, ಎಚ್.ಎಲ್.ನಾಗೇಗೌಡರ ದೊಡ್ಡಮನೆ, ನವೋದಯ ಸಂಪ್ರದಾಯದ ಅನೇಕ ಪ್ರಬಂಧ ಕೃತಿಗಳು. ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಪ್ರಸ್ತುತ 'ಸೊನ್ನೆಯಿಂದ ಸೊನ್ನೆಗೆ' ಎಂಬ ಕಾದಂಬರಿ ಸಂಪೂರ್ಣವಾಗಿ ಗ್ರಾಮೀಣ ಬಾಳನ್ನು ಚಿತ್ರಿಸುವುದರಿಂದ ಇದಕ್ಕೆ ಹಿನ್ನೆಲೆಯಾಗಿ 'ಜನಪದದ ಸ್ವರೂಪ ಮತ್ತು ಮಹತ್ವ' ಎಂಬ ತಾತ್ವಿಕ ಚೌಕಟ್ಟನ್ನು ಕೊಡಲಾಗಿದೆ.

'ಜಾನಪದ' ಎಂಬುದು ಜನಪದಕ್ಕೆ ಸಂಬಂಧಪಟ್ಟದ್ದು, ಅವರ ಸಮಸ್ತ ಬದುಕನ್ನು ಚಿತ್ರಿಸುವ ಜೀವನವಿಧಾನ: "ಮಾನವನ ಸಾಂಸ್ಕೃತಿಕ ಕ್ಷೇತ್ರದಲ್ಲಿ ಜಾನಪದ ಎಂಬುದು ಅತ್ಯಂತ ಮಹತ್ತರ ವಿಷಯವಾಗಿದೆ. ಈ ಐತಿಹಾಸಿಕ ವಿಜ್ಞಾನ ಬರಿಯ ಊಹೆಯನ್ನು ಅವಲಂಬಿಸಿರುವ ಶಾಸ್ತ್ರವಾಗಿರದೆ ವಾಸ್ತವಿಕ ಆಧಾರಗಳ ಮೇಲೆ ಬೆಳೆಯುತ್ತಿರುವ ಅಧ್ಯಯನ ವಿಷಯವಾಗಿದೆ,"[೧] ಎಂಬ ಮಾತು ಜಾನಪದ ಅಂಶಗಳ ಪ್ರತಿಪಾದನೆಗೆ ಸೂಕ್ತ ಉದಾಹರಣೆ ನೀಡಬಹುದು ಇಲ್ಲವೇ ಇಂದಿನ ಸಮಾಜದಲ್ಲೂ ಜಾನಪದೀಯ ಅಂಶಗಳು ಕೆಲವೊಂದು ಬದಲಾವಣೆಯೊಂದಿಗೆ ಚಲಾವಣೆಯಲ್ಲಿರುವುದನ್ನು ಗುರುತಿಸಬಹುದು ಎನ್ನುವುದಕ್ಕೆ ಪುಷ್ಟಿನೀಡುತ್ತದೆ. ಜನ ಅಂದರೆ ಕೊನೆಪಕ್ಷ ಒಂದಾದರೂ ಸಮಾನ ಅಂಶವನ್ನುಳ್ಳ ಜನರ ಗುಂಪು. ಈ ಸಮಾನ ಅಂಶ ಯಾವುದಾದರೂ ಆಗಿರಬಹುದು. ಸಮಾನ ಧರ್ಮ-ವಾಗಿರಬಹುದು, ಭಾಷೆಯಾಗಿರಬಹುದು. ಕಸುಬಾಗಿರಬಹುದು, ಯಾವುದೇ ಕಾರಣದಿಂದ ಈ ಜನ ಗುಂಪಾಗಿರಲಿ, ಇವರಿಗೆ ತಮ್ಮದೆಂದು ಹೇಳಿಕೊಳ್ಳುವ ಒಂದು ಪರಂಪರೆ ಇರುತ್ತದೆ.

ಜನಪದ ಶಬ್ದ ಸರಳವೂ ಹೌದು; ಸಂಕೀರ್ಣವೂ ಹೌದು. ಇದರಲ್ಲಿ ಜನ, ಜನರ ಭಾಷೆ, ಅವರ ಸ್ಥಳ, ಅಥವಾ ದೇಶ, ಜಾತಿ, ಪಂಗಡ, ಆಚಾರ-ವಿಚಾರ, ಕಲೆ, ಸಾಹಿತ್ಯ

---

೧. ಹಾ.ಮಾ.ನಾಯಕ, ಜನಪದ ಸ್ವರೂಪ, ೧೯೭೧, ಪು. ೧೬

ಮುಂತಾದುವು ಅಡಕವಾಗಿವೆ. ಜನಪದ ಘಟಕ ಒಂದು ಕುಟುಂಬ, ಒಂದು ಸಮಾಜ, ಕೊನೆಗೆ ಒಂದೇ ಕುಟುಂಬದ ವ್ಯಕ್ತಿಯೂ ಆಗಿರುತ್ತದೆ.

ಜಾನಪದದಲ್ಲಿ ಅನೇಕ ವಿಷಯಗಳು ಬರುತ್ತವೆ. ಒಂದೊಂದು ಗುಂಪಿನಲ್ಲಿ ಅನೇಕ ಜಾನಪದದ ರೂಪ (Forms)ಗಳಿರುತ್ತವೆ. ಪುರಾಣಗಳು, ಕಟ್ಟುಕಥೆಗಳು, ಕತೆಗಳು, ಗಾದೆ, ಒಡಪು, ಬೈಗುಳ, ಆಣೆಮಾಡುವುದು, ಹಾಡು, ಕುಣಿತ, ಸಂಗೀತ, ಉಪಭಾಷೆ, ಉತ್ಸವ, ಹಬ್ಬಹರಿದಿನಗಳು, ಮದುವೆ ಪದ್ಧತಿಗಳು ಮೊದಲಾದ ಜೀವನವಿಧಾನಗಳು ಸೇರುತ್ತವೆ. ಮನಶಾಸ್ತ್ರಜ್ಞರು, ಭಾಷಾತಜ್ಞರು, ಸಾಹಿತ್ಯಾಸಕ್ತರು ಹೀಗೆ ಇಲ್ಲಿ ಯಾರಿಗೂ ವಿಷಯವಿದೆ. ಸಾಹಿತ್ಯಾಸಕ್ತರಿಗೆ ಇಲ್ಲಿನ ವಿನೂತನ ವಸ್ತು ಶೈಲಿ ಸ್ವರೂಪ, ಪ್ರಯೋಗ ಈ ಭಾಷೆಯ ಹಸಿತನ ಬೆರಗಿನ ವಿಷಯವಾದರೆ ಭಾಷಾ ಶಾಸ್ತ್ರಜ್ಞರಿಗೆ ಈ ಭಾಷೆ ಕುತೂಹಲದ ವಿಷಯವಾಗುತ್ತದೆ. ಕತೆ, ಹಾಡು, ಪುರಾಣ ಕತೆಗಳಲ್ಲಿರುವ ಮಾನಸಿಕ ಪ್ರೇರಣೆಗಳನ್ನು ತಿಳಿಯಲು ಮನಶಾಸ್ತ್ರಜ್ಞರೇ ಬರಬೇಕು. ಮಾನವ ಶಾಸ್ತ್ರಗಳಿಗಂತೂ ಜಾನಪದ ಸಂಸ್ಕೃತಿಯ ಒಂದು ಮುಖ್ಯವಾದ ಅಂಗ.

ಜನಪದ ಒಂದು ಸಂಸ್ಕೃತಿಯು ಮುಗಿದು ಪೂರ್ತಿಯಾದ ಅವಸ್ಥೆಯಲ್ಲ, ಜೀವಂತವಾಗಿರುವ ಅವಸ್ಥೆ, ನಂಬಿಕೆ, ಧೋರಣೆ, ಸಂಪ್ರದಾಯ, ಪರಂಪರೆಗಳು ತಲೆಮಾರಿನಿಂದ ತಲೆಮಾರಿಗೆ ಸಾಗಿಸಲ್ಪಡುತ್ತವೆ. ಜಾನಪದ ಸಂಸ್ಕೃತಿಯ ಒಂದು ಅಂಗ. ''ಜೀವನವಿಧಾನವನ್ನು ಒಳಗೊಳ್ಳುವ ಪೂರ್ಣವಾದ ಚೌಕಟ್ಟನ್ನು 'ಜನಪದ' ಎಂದು ಕರೆದರೆ, ಜನಪದ ಸಾಹಿತ್ಯ ಗೀತೆ, ಲಾವಣಿ, ಕಾವ್ಯ, ಕಥೆ, ಗಾದೆ, ಒಗಟು ಇತ್ಯಾದಿಯನ್ನು ಒಳಗೊಂಡ ಜಾನಪದದ ಒಂದು ಸಣ್ಣ ಅಂಗ ಮಾತ್ರವಾಗಿದೆ''[೧] ಈ ಎರಡೂ ಹೇಳಿಕೆಗಳು ಜಾನಪದ ಎಂಬುದರ ವೈಶಾಲ್ಯ ಎಷ್ಟೆಂದರೆ ಅದು ಒಳಗೊಳ್ಳದ ವಿಚಾರ ಕಿಂಚಿತ್ತೂ ಇಲ್ಲ ಎಂಬ ಒಮ್ಮತದ ಅಭಿಪ್ರಾಯ ಮೂಡಿಸುತ್ತವೆ. ''ಜಾನಪದವನ್ನು ಸಂಸ್ಕೃತಿಯ ಒಂದು ಅಂಗ ತೋಂಡಿಯಾಗಿ ಇಲ್ಲವೆ ಮೂಢನಂಬಿಕೆ, ಬಣ್ಣಗಾರಿಕೆ, ನಡವಳಿಕೆ, ನೃತ್ಯಗಳಂತೆ ಮಾದರಿಯಾಗಿ ತಲೆಮಾರಿನಿಂದ ತಲೆಮಾರಿಗೆ ಸಾಗಿಸಲ್ಪಡುವಂತದ್ದು. ಅದು ಲಾವಣಿ ಕಥೆ, ಪುರಾಣ, ಗಾದೆ, ಒಗಟು– ಹೀಗೆ ಶಾಬ್ದಿಕವಾಗಿ ಯಾವುದೇ ಆಗಿರಬಹುದು. ಶಾಬ್ದಿಕವಲ್ಲದ ಕಲಾರೂಪಗಳು ಅದರಲ್ಲಿದ್ದರೂ ಮುಖ್ಯವಾಗಿ ತೋಂಡಿಗುಣಧರ್ಮ ಅದರ ಉಸಿರು ಎಂದು ಹೇಳಬಹುದು. ಸ್ಥೂಲವಾಗಿ ಇದು ಇಂದಿನ ಜನಪದ ಕಲ್ಪನೆ''.[೨]

ಇಂಗ್ಲಿಷ್ ಭಾಷೆಯಲ್ಲಿ 'Folklore' ಎಂದು ಬಳಸುತ್ತಿರುವ ಶಬ್ದಕ್ಕೆ ಸಮಾನಾರ್ಥಕವಾಗಿ 'ಜನಪದ' ಎಂಬ ಶಬ್ದವನ್ನು ಬಳಸುತ್ತಿದ್ದೇವೆ. ಪಾಶ್ಚಿಮಾತ್ಯ ದೇಶಗಳ ವಿದ್ವಾಂಸರು ಜನಪದ ಸಂಸ್ಕೃತಿಯ ಸಂಪೂರ್ಣ ಧ್ವನಿ ಕೊಡುವ ಶಬ್ದಕ್ಕಾಗಿ ಬಹಳ ಶ್ರಮಪಟ್ಟು ಸಂಶೋಧನೆ

೧. ನಾಗವಾರ ಕಾಳೇಗೌಡ– ಜನಪದ ಸಾಹಿತ್ಯ, ೧೯೯೬

೨. ಕನ್ನಡ ಜಾನಪದ ವಿಶ್ವಕೋಶ– ಸಂ.ಚಂದ್ರಶೇಖರ ಕಂಬಾರ, ಸಂ.೧, ಸಾಹಿತ್ಯಪರಿಷತ್ತು, ೧೯೮೫

ನಡೆಸಿ ಕೊನೆಗೆ 'Folklore' ಎಂಬ ಶಬ್ದ ಬಳಕೆಗೆ ತಂದಿದ್ದಾರೆ. ಈ ಅಪರೂಪದ ಶಬ್ದವನ್ನು ಇಂಗ್ಲೆಂಡಿನ ಡಬ್ಲ್ಯು.ಜೆ.ಥಾಂಸ್ ಎಂಬುವರು ೧೮೪೬ರಲ್ಲಿ ಸೃಷ್ಟಿಮಾಡಿದರು. ಈ ಹಿಂದೆ ಜನಪ್ರಿಯ ನಡವಳಿಕೆಗಳು (Popular antiquity) ಎಂಬ ನುಡಿಗಟ್ಟಿನಲ್ಲಿ ಬಳಕೆಯಾಗುತ್ತಿದ್ದದ್ದು ಹಿಂದೆ ಸರಿದು, 'Folklore' ಎಂಬ ಶಬ್ದ ರೂಡಿಗೆ ಬಂತು. ''ಪ್ರಾಚೀನ ಕಾಲದ, ಪ್ರಾಚೀನ ಜನರ ಸಮಸ್ತ ಸಂಸ್ಕೃತಿಯ ಸಾರ ರೂಪವೇ ಜಾನಪದ. ಅದರ ಅಭ್ಯಾಸವೇ ಜಾನಪದದ ಅಭ್ಯಾಸ. ಜಾನಪದ ಅಭ್ಯಾಸವೆಂದರೆ ಮನುಕುಲದ ಸಾಂಸ್ಕೃತಿಕ ಪರಂಪರೆಯ ಅಭ್ಯಾಸವೆಂದೇ ಅರ್ಥ''[೧] ಎಂಬ ಮಾತಿನಲ್ಲಿಯೂ ಜಾನಪದದ ಆಳಅಗಲಗಳನ್ನು ಗುರುತಿಸಬಹುದಾಗಿದೆ.

ಜನಪದ ಅಧ್ಯಯನವನ್ನು ಬ್ರಿಟಿಷರು ಹುಟ್ಟುಹಾಕಿದರು. ಅಮೆರಿಕದವರು ಅದನ್ನು ಬೃಹತ್ತಾಗಿ ಬೆಳೆಸಿದರು. ಜಾನಪದವೇ ಇಲ್ಲವೇನೋ ಅನ್ನುವಂತಹ ಅಮೆರಿಕದಲ್ಲಿ ಜಾನಪದ ಅಧ್ಯಯನ ಹುಲುಸಾಗಿ ಬೆಳೆಯಿತು. ೧೮೪೬ ರಲ್ಲಿ ಡಬ್ಲ್ಯು.ಜೆ.ಥಾಂಸ್ ವಿಶಾಲವಾದ ಅರ್ಥದಲ್ಲಿ 'Folklore' ಶಬ್ದವನ್ನು ಸೃಷ್ಟಿಸಿದ ಮೇಲೆ ಜಗತ್ತಿನ ಬಹುತೇಕ ವಿದ್ವಾಂಸರು ಈ ಶಬ್ದದ ಸೂತ್ರಪ್ರಾಯವಾದ ವ್ಯಾಖ್ಯೆಗೆ ಪ್ರಯತ್ನಿಸಿದರು. ೧೯೪೯ರಲ್ಲಿ ಮೇರಿಯ ಲೀಚ್ (Maria Leach) ಎಂಬವರ ಸಂಪಾದಕತ್ವದಲ್ಲಿ 'Standard Dictionary of Folklore, Mythology and Legend' ಎಂಬ ಜಾನಪದ ವಿಶ್ವಕೋಶ ಪ್ರಕಟವಾಯಿತು. ಇದರಲ್ಲಿ ಇಪ್ಪತ್ತೊಂದು ಜನ ವಿದ್ವಾಂಸರು ಜನಪದವನ್ನು ಕುರಿತು ತಮ್ಮ ವ್ಯಾಖ್ಯಾನಗಳನ್ನು ನೀಡಿದ್ದಾರೆ.

ಪ್ರಸ್ತುತ ಪ್ರಾತಿನಿಧಿಕವಾಗಿ ಕೆಲವು ವಿದ್ವಾಂಸರ ವ್ಯಾಖ್ಯೆಗಳನ್ನು ಪರಿಭಾವಿಸಲಾಗಿದೆ.

೧ ಆಂಡ್ರೂ ಲಾಂಗ್ ಎನ್ನುವವರು ಹತ್ತೊಂಬತ್ತನೇ ಶತಮಾನದ ಪ್ರಖ್ಯಾತ ಮಾನವ ಶಾಸ್ತ್ರಜ್ಞರು. ಇವರು ವಿವರವಾಗಿ ಜಾನಪದವನ್ನು ಹೀಗೆ ವ್ಯಾಖ್ಯಾನಿಸಿದ್ದಾರೆ. ''ಜನಾಂಗಗಳ ಪಳೆಯುಳಿಕೆಗಳನ್ನು ಸಂಗ್ರಹಿಸಿ ಅಧ್ಯಯನ ಮಾಡುವ ವಿಜ್ಞಾನ. ಜನಜೀವನದಲ್ಲಿ ಇಂದಿಗೂ ಕಂಡುಬರುವ ಆದರೆ ಈ ಕಾಲದವಲ್ಲದ ಕಥೆ, ನಂಬಿಕೆ ವಿಚಾರಗಳನ್ನು ಕುರಿತು ಈ ವಿಜ್ಞಾನ ಅಧ್ಯಯನ ಮಾಡುತ್ತದೆ. ಸಮಾಜದ ಕೆಳಗಿನ ಸ್ತರದ ಐತಿಹ್ಯ; ಸಂಪ್ರದಾಯ, ನಂಬಿಕೆ ಮುಂತಾದವುಗಳ ಮೊತ್ತವೇ ಜಾನಪದ''

೨ ಎಡ್ವಿನ್ ಸಿಡ್ನಿ ಹಾರ್ಟ್‌ಲ್ಯಾಂಡ್ ''ಜಾನಪದ ಎನ್ನುವುದು ಸಂಪ್ರದಾಯಗಳ ವಿಜ್ಞಾನ'' ಎಂದಿದ್ದಾರೆ.

೩. ಬಿ.ಎ.ಬಾಟ್ಕಿನ್ ಪ್ರಕಾರ ''ಶುದ್ಧ ಮೌಖಿಕ ಸಂಸ್ಕೃತಿಯಲ್ಲಿ ಪ್ರತಿಯೊಂದೂ ಜಾನಪದವೇ''.

---

೧. ಡಿ.ಲಿಂಗಯ್ಯ, ಕೆ.ಆರ್.ಸಂಧ್ಯಾರೆಡ್ಡಿ, ಜಾನಪದ ಸ್ವರೂಪ ಮತ್ತು ಸಾಹಿತ್ಯ, ೨೦೦೬, ಕನ್ನಡ ಸಾಹಿತ್ಯ ಪರಿಷತ್ತು.

೪ ಇ.ಡಬ್ಲ್ಯು.ವೋಯ್ಗಲಿನ್ ಹೇಳುವಂತೆ "ಮೌಖಿಕ ಸಂಪ್ರದಾಯದಲ್ಲಿ ಸಾಗಿಬಂದ ಯಾವುದೇ ಪರಂಪರಾನುಗತ ವಿಷಯವಾಗಿರಲಿ, ಸಾಂಪ್ರದಾಯಿಕ ಗದ್ಯಪದ್ಯವಾಗಿರಲಿ ಅದು ಜಾನಪದ".

೫ ಲಾವಣಿ ವಿದ್ವಾಂಸರಾಗಿದ್ದ ಮ್ಯಾಕ ಎಡ್ವರ್ಡ್ ಲೀಚ್ "ಸಂಗ್ರಹಗೊಂಡ ಅನುಭವ ಭಂಡಾರ ಜಾನಪದ" ಎಂದಿದ್ದಾರೆ.

೬ ಸಿ.ಎಫ್.ಪಾಟಕ್; "ಜಾನಪದ ಸಾಯಲು ಇಷ್ಟಪಡದ ಜೀವಂತ ಪಳೆಯುಳಿಕೆ".

೭ "ಅಲಿಖಿತ ರೂಪದ ಸಾಹಿತ್ಯ ಶಿಕ್ಷಿತ ಜನಾಂಗದಲ್ಲಿರಲಿ, ಅಶಿಕ್ಷಿತ ಜನಾಂಗದಲ್ಲಿರಲಿ ಅದು ಅರ್ಥವತ್ತಾದುದು". ಹೀಗೆಂದವರು ಜಾರ್ಜ್ ಎಂ. ಫಾಸ್ಟರ್.

೮ ಆರ್ಚರ್ ಟೇಯ್ಲರ್ "ಜಾನಪದ ಕರ್ತೃವಿಲ್ಲದ ಪರಂಪರಾಗತ ವಸ್ತುಗಳನ್ನು ತಲೆಮಾರಿನಿಂದ ತಲೆಮಾರಿಗೆ ಹಸ್ತಾಂತರಿಸುತ್ತದೆ" ಎನ್ನುತ್ತಾರೆ.

ಜಾನಪದ ವಿದ್ವಾಂಸರ ಅಭಿಪ್ರಾಯಗಳನ್ನು ಲಕ್ಷಿಸಿ ಅರ್ಥೈಸುವುದಾದರೆ "ಮಾನವ ಮತ್ತು ಅವನ ವರ್ತನೆಗಳನ್ನು ಕುರಿತ ಸಂಸ್ಕೃತಿಯ ಭಾಗವೇ ಜಾನಪದ. ಅದು ಒಂದು ಜನವರ್ಗದ ಸಮಸ್ತ ಬದುಕಿನ ಇತಿಹಾಸ. ಅದು ಸಾಂಪ್ರದಾಯಿಕ ರೀತಿಯ ಜನಜೀವನದ ಎಲ್ಲಾ ಸ್ತರಗಳಿಗೂ ವ್ಯಾಪಿಸುತ್ತದೆ. ನಾಗರಿಕ ಮತ್ತು ಶಿಷ್ಟ ಸಂಸ್ಕೃತಿಗಳಿಂದ ದೂರ ಸರಿದ ಪರಂಪರಾನುಗತವಾದ ಬೆಳವಣಿಗೆಯನ್ನು ಪಡೆದ ಜನ ಸಾಮಾನ್ಯರ ವಿಶಿಷ್ಟ ಸಂಸ್ಕೃತಿ ಅದು. ಅವರ ಜೀವನದ ಸಮಸ್ತ ವಿಷಯಗಳೂ ಅದರಲ್ಲಿ ಸಮಾವೇಶಗೊಳ್ಳುತ್ತವೆ"[೧]

**ಮಹತ್ವ:**

ಮಾನವ ಶಾಸ್ತ್ರಜ್ಞ ಬೋಯಾಸ್ ಎಂಬವರು 'ಜಾನಪದವು ಸಂಸ್ಕೃತಿಯ ಪ್ರತಿಬಿಂಬ' ಎಂದಿದ್ದಾರೆ. ಸಂಸ್ಕೃತಿಯ ಅಧ್ಯಯನಕ್ಕೆ ವಿಪುಲ ಸಾಮಗ್ರಿಗಳು ಜಾನಪದದಲ್ಲಿ ದೊರೆಯುತ್ತವೆ. ಈ ಕಾರಣವಾಗಿ ಇದನ್ನು ಶಾಸ್ತ್ರೀಯ ನೆಲೆಗಟ್ಟಿನಲ್ಲಿ ವೈಜ್ಞಾನಿಕವಾದ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಪ್ರವೃತ್ತಿ ಇಂದು ಪ್ರಾರಂಭವಾಗಿದೆ. ಆಕರ್ಷಕವಾದ ಜಾನಪದ ಅಧ್ಯಯನದಲ್ಲಿ ವಿವಿಧತೆ, ವಿನೂತನತೆ ವ್ಯಾಪಕತೆ ಎಲ್ಲರ ಮನಸ್ಸನ್ನು ಸೂರೆಗೊಳ್ಳುತ್ತಿದೆ. "ಅದು ಐತಿಹಾಸಿಕ ದಾಖಲೆಗಳಿಲ್ಲದ ಕಡೆಗಳಲ್ಲಿ ಗತಿಸಿಹೋದ ಬದುಕಿನ ಸಾರವನ್ನು ಉಳಿಸಿಕೊಂಡು ಬರುತ್ತದೆ. ಈ ಅರ್ಥದಲ್ಲಿ ಅದು ವರ್ತಮಾನಕ್ಕೆ ಭೂತವನ್ನು ಸೇರಿಸುವ ಕೊಂಡಿ"[೨] ಎನ್ನುವಲ್ಲಿ ಜಾನಪದ ಸಾಗಿಬಂದ ಬಗೆ ಹಾಗೂ ಅಂದು ಇಂದಿಗೂ ಅವಶ್ಯಕ ಎಂಬುದನ್ನು ಮನಗಾಣಬಹುದು. ಜಾನಪದದ ಮಹತ್ವ ಅದನ್ನು ಬಳಸಿಕೊಳ್ಳುವವರ ಮನೋಧರ್ಮದ ಉದಾತ್ತತೆಯನ್ನು

---

೧. ಜೀ.ಶಂ.ಪರಮಶಿವಯ್ಯ, ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ೧೯೭೯

೨. ಅಂಬಳಿಕೆ ಹಿರಿಯಣ್ಣ, ಜಾನಪದ– ಕೆಲವು ವಿಚಾರಗಳು– (ಎರಡನೆ ಮುದ್ರಣ), ೧೯೯೯

ಅವಲಂಬಿಸಿದೆ. ಜಾನಪದ ವರ್ತಮಾನ ಕಾಲಕ್ಕೆ ಭೂತಕಾಲದ ಕೊಂಡಿಯನ್ನು ಸೇರಿಸುವ ಕೈಂಕರ್ಯವನ್ನು ನಿರ್ವಹಿಸುವಂಥದ್ದು. ನಾಗರಿಕ ಜೀವನ ನಿಸ್ಸಾರವಾದಾಗ ಜನಪದ ಅದನ್ನು ಸಾರವಾಗಿ ಪರಿವರ್ತಿಸಿ ಹೊಸ ಹುರುಪು ತುಂಬಲು ನೆರವಾಗುತ್ತದೆ.

"ಜಾನಪದ ಸಾಹಿತ್ಯವೆಂದರೆ ಸಾಕು ರೋಮಾಂಚನಗೊಳ್ಳುವ ಭಾವವಲಯವನ್ನು ಮೀರಿ ಒಟ್ಟು ಜಾನಪದವನ್ನು ವಿಶ್ಲೇಷಿಸುತ್ತ ಒಳನೋಟಗಳು ಹುಟ್ಟಿಕೊಳ್ಳುವುದು ನಮ್ಮ ಸಂದರ್ಭದ ಒಂದು ಅಪೇಕ್ಷೆಯಾಗಿದೆ. ವೈಭವೀಕರಣದ ಪ್ರವೃತ್ತಿಯನ್ನು ಟ್ಟು ಒಳಹೋಗುವ ಕ್ರಿಯೆ ಹೆಚ್ಚು ಅರ್ಥಪೂರ್ಣವಾಗಬೇಕಾದರೆ ಶಿಷ್ಟ ಸಾಹಿತ್ಯ ಮತ್ತು ಜಾನಪದದ ಸಂಬಂಧಗಳು ಕೇವಲ ಸಾಹಿತ್ಯದ ಸಂಬಂಧವಲ್ಲ. ಒಟ್ಟು ಸಂಸ್ಕೃತಿಯ ಸಂಬಂಧ"[೧] ಎಂಬಲ್ಲಿ ಜಾನಪದದ ಎಲ್ಲೆಯನ್ನು ಇಂತಿಷ್ಟೇ ಎಂದು ಗುರುತಿಸಲಾಗದು; ಅದು ಅಪರಿಮಿತವಾದುದು ಎಂದು ಅರಿವಾಗುತ್ತದೆ.

ಬ್ರಿಟೀಷರ ಕಾಲಕ್ಕೆ ಜಾನಪದೀಯ ಅಧ್ಯಯನ ಮೊದಲಾಯಿತು. ಫ್ಲೀಟ್ ಮೊದಲಾದವರು ಲಾವಣಿ ಸಂಗ್ರಹ, ಸಂಪಾದನೆ, ಪ್ರಕಟಣೆಯಲ್ಲಿ ತೊಡಗಿದರು. ಇಂದು ಆಧುನಿಕ ಸಂದರ್ಭದಲ್ಲಿ ಜಾನಪದವೆಂದರೆ ಬರಿಯ ಸಾಹಿತ್ಯವಲ್ಲ; ಸಂಸ್ಕೃತಿಯ ವಿರಾಡ್ರೂಪ; ಹಲವು ನೆಲೆಗಳಲ್ಲಿ, ನಿಟ್ಟುಗಳಲ್ಲಿ ಜಾನಪದ ಕುರಿತ ಅಧ್ಯಯನ, ಸಂಶೋಧನೆಗಳು ವ್ಯಾಪಕವಾಗಿ, ವಿಪುಲವಾಗಿ ನಡೆಯುತ್ತಿವೆ. ಸಾಹಿತ್ಯ ಕೃತಿಗಳನ್ನು ಸಾಂಸ್ಕೃತಿಕವಾಗಿ, ಜಾನಪದೀಯವಾಗಿ ಮತ್ತು ತೌಲನಿಕವಾಗಿ ಅಧ್ಯಯನ ಮಾಡುವುದು, ವಿಭಿನ್ನ ನೆಲೆಗಳಿಂದ ಅಭ್ಯಸಿಸುವುದು ಪ್ರಾರಂಭವಾಗಿದೆ. 'ವಚನಸಾಹಿತ್ಯದಲ್ಲಿ ಜಾನಪದೀಯ ಅಂಶಗಳು' ಎಂಬ ವಿಷಯದಲ್ಲಿ ಸಿ.ಕೆ.ನಾವಲಗಿ ಅವರು ಸಂಶೋಧನೆ ನಡೆಸಿದ್ದಾರೆ. ಹೀಗೆ ದೇಸಿ ಹಿನ್ನೆಲೆಯಲ್ಲಿ ಸಂಶೋಧನೆ ನಡೆಸಿ ದೇಸಿ ಸಂಸ್ಕೃತಿಯ ಮಹತ್ವವನ್ನರಿತು ನಿರ್ಲಕ್ಷಿತವಾದುದನ್ನು ಪುರಸ್ಕರಿಸುವ ಸಕಾರಾತ್ಮಕವಾದ ದೃಷ್ಟಿ ಬೆಳೆಯುತ್ತಿದೆ. ಹೊಸ ಸಾಧ್ಯತೆಗಳೊಂದಿಗೆ ಲೇಖಕರ, ಕೃತಿಯ ಹೊಸಮುಖವನ್ನು, ಇನ್ನೊಂದು ದೃಷ್ಟಿಯನ್ನು ಚರ್ಚಿಸುವ ಕ್ರಮದಿಂದ ಈ ಕ್ಷೇತ್ರದಲ್ಲಿ ಇನ್ನೂ ಆಗಬೇಕಾದ ಕೆಲಸಗಳನ್ನೂ ಮರೆಯುವಂತಿಲ್ಲ.

--

೧. ಬರಗೂರು ರಾಮಚಂದ್ರಪ್ಪ – ಪ್ರಧಾನ ಸಂಪಾದಕರು, ಕನ್ನಡ ಶಿಷ್ಟಸಾಹಿತ್ಯದಲ್ಲಿ ಜನಪದ – ವಿವಿಧ ಲೇಖಕರು, ೧೯೯೩.

## ಅಧ್ಯಾಯ : ಮೂರು

# ಎಚ್.ಎಲ್.ಎನ್. ಅವರ ಜೀವನ ಸಾಧನೆ

**ಎಚ್**.ಎಲ್.ನಾಗೇಗೌಡ ಅವರು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸೃಜನಶೀಲ ಅನುವಾದ ಸೇರಿದಂತೆ ಜನಪದ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ನವೋದಯ ಕಾಲದ ಬೆರಳೆಣಿಕೆಯಷ್ಟು ಲೇಖಕರಲ್ಲಿ ಒಬ್ಬರು. ಕನ್ನಡ ನಾಡು–ನುಡಿ, ಸಂಸ್ಕೃತಿಗೆ ಅಚ್ಚಳಿಯದ ಸೇವೆಸಲ್ಲಿಸಿರುವ ಗೌಡರದು ಬಹುಮುಖ ಪ್ರತಿಭೆ. ಜನಪದ ಸಾಮಗ್ರಿಗಳ ಸಂಗ್ರಹದ ಸಂಶೋಧಕರಾಗಿ, ಸಾಂಸ್ಥಿಕ ಜನಪದ ನಿರ್ಮಾತೃವಾಗಿ ನಾಡಿಗೆ ಬಹುದೊಡ್ಡ ಕೊಡುಗೆ ನೀಡಿದ್ದಾರೆ. ಪ್ರತಿಭಾವಂತ ಲೇಖಕರಾಗಿ ಕನ್ನಡ ಜಾನಪದ ಸಾಹಿತ್ಯವನ್ನು ಬೆಳೆಸಿದ್ದಾರೆ. ಒಬ್ಬ ವ್ಯಕ್ತಿ ತನ್ನ ಜೀವಿತದ ಅವಧಿಯಲ್ಲಿ ಇಷ್ಟೆಲ್ಲವನ್ನೂ ಸಾಧಿಸಲು ಸಾಧ್ಯವೇ? ಎಂದು ಒಮ್ಮೊಮ್ಮೆ ಅನ್ನಿಸುವುದೂ ಉಂಟು. ಇನ್ನೂ ಮಹತ್ವದ ಸಂಗತಿಯೆಂದರೆ ಅವರ ಸಾಧನೆಯಂತೆ ಅವರ ವ್ಯಕ್ತಿತ್ವ ಕೂಡ ಘನವಾದುದಾಗಿರುವುದು!

ಸರಕಾರದ ಉನ್ನತ ಅಧಿಕಾರಿಯಾಗಿಯೂ ಹಳ್ಳಿಯ ಬದುಕಿನ ಸಂಪರ್ಕವನ್ನು ಕಳೆದುಕೊಳ್ಳದೆ, ಅದರ ವರ್ಣವೈವಿಧ್ಯವನ್ನು ಪುನರ್‌ನಿರ್ಮಿಸುವ ಆಕಾಂಕ್ಷೆ ಹೊಂದಿದವರಾಗಿ ತಮ್ಮ ಕಾದಂಬರಿಗಳ ಮೂಲಕ ಅದನ್ನು ನೆರವೇರಿಸಿದ್ದಾರೆ. ಇದು ಎಚ್.ಎಲ್.ಎನ್ ಬರವಣಿಗೆಯ ವೈಶಿಷ್ಟ್ಯವಾಗಿದೆ. ನಾಗೇಗೌಡರ ಸಾಹಿತ್ಯದ ಹಿಂದೆ ಅಪಾರವಾದ ತ್ಯಾಗ ಮತ್ತು ದುಡಿಮೆಯಿದೆ. ಈ ದುಡಿಮೆಯಿಂದಾಗಿ ಅವರು ಪ್ರತಿಷ್ಠಿತರಾಗಿದ್ದಾರೆ. ಸಮಕಾಲೀನ ಸಾಹಿತಿಗಳಿಗಿಂತ ಭಿನ್ನರಾಗಿ ಸೃಜನಶೀಲ ಸಾಹಿತ್ಯ, ಅನುವಾದ, ಜಾನಪದ ಕ್ಷೇತ್ರಗಳಲ್ಲಿ ಮೌಲಿಕ ಗ್ರಂಥಗಳನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

"ವೃತ್ತಿಯಲ್ಲಿ ನಾಡಿನ ಅತ್ಯಂತ ಹಿರಿಯ ಅಧಿಕಾರಿಗಳಲ್ಲೊಬ್ಬರಾಗಿ ಕರ್ತವ್ಯ ನಿರ್ವಹಿಸದ ಇಲಾಖೆಯೇ ಇಲ್ಲವೆನ್ನುವಂತೆ ಸುಮಾರು ೪೦ ವರ್ಷ ನಿಷ್ಠೆಯಿಂದ ದುಡಿದು, ಪ್ರವೃತ್ತಿಯಿಂದ ಸಾಹಿತಿಯಾಗಿ ತಮ್ಮ ಒಂದೊಂದು ಕೃತಿಯಲ್ಲೂ ಒಂದೊಂದು ವಿಶೇಷಾಂಶವನ್ನಳವಡಿಸಿ ಸಾಹಿತ್ಯದೇವಿಗೆ ವಿಶಿಷ್ಟ ಸೇವೆ ಸಲ್ಲಿಸಿದ ನಾಗೇಗೌಡರದು ಜನಪದ ಸಂಸ್ಕೃತಿಯ ಉಳಿವಿಗಾಗಿ, ಬೆಳವಿಗಾಗಿ ಸುಷುಪ್ತಿಯಲ್ಲೂ ತುಡಿಯುತ್ತಿರುವ ಜೀವ. ಒರ್ವ ಐ.ಎ.ಎಸ್ ಮಟ್ಟದ ಅಧಿಕಾರಿ ತನ್ನ ಅವಿರತ ಶ್ರಮ ಹಾಗೂ ನಿಷ್ಠೆಗಳಿಂದಾಗಿ ಆಡಳಿತ, ಸಾಹಿತ್ಯ, ಜಾನಪದ ಮುಂತಾದ ಕ್ಷೇತ್ರಗಳಲ್ಲಿ ಏನೇನು ಸಾಧಿಸಬಲ್ಲನೆಂಬುದಕ್ಕೆ ಗೌಡರು ಬಹುದೊಡ್ಡ ಉದಾಹರಣೆ"[೧] ಎಂಬ ಅಭಿಪ್ರಾಯದಲ್ಲಿ ಹುರುಳಿಲ್ಲದಿಲ್ಲ.

---

೧. ನಾಗಸಂಪದ, ಶ್ರೀ ಎಚ್.ಎಲ್.ನಾಗೇಗೌಡರು, ಜೀವನ ಮತ್ತು ಸಾಧನೆ, ಸಂಪಾದಕ: ಚಕ್ಕೆರೆ ಶಿವಶಂಕರ್, ಕರ್ನಾಟಕ ಜಾನಪದ ಪರಿಷತ್ತು.

**ಸಾಹಿತ್ಯಸೇವೆ:**

ಎಚ್.ಎಲ್.ನಾಗೇಗೌಡರ ಬಹುಮುಖ ಪ್ರತಿಭೆಯ ಸಾಹಿತ್ಯ ಕೃಷಿಯನ್ನು ಅನುವಾದ, ಜೀವನಚರಿತ್ರೆ, ಆತ್ಮಕಥೆ, ಕಥೆ, ಕಾದಂಬರಿ, ಕಾವ್ಯ, ಪ್ರಬಂಧ, ಪ್ರವಾಸಕಥನ ಮತ್ತು ಜಾನಪದ ಎಂದು ವಿಂಗಡಿಸಿಕೊಳ್ಳಬಹುದು. ಕನ್ನಡ ಸಾಹಿತ್ಯ ಲೋಕಕ್ಕೆ ಅನುವಾದಕರಾಗಿ ಕಾಲಿಟ್ಟರೂ ವಿದ್ಯಾರ್ಥಿದಿಸೆಯಲ್ಲೇ ಕವನ ಬರೆಯುವುದನ್ನು ರೂಢಿಸಿಕೊಂಡಿದ್ದರು. 'ಸರ್ ವಾಲ್ಟರ್ ಸ್ಕಾಟ್' ಅವರ ಇಂಗ್ಲಿಷ್ ಕಾದಂಬರಿ 'ಕೆನಿಲ್‌ವರ್ಥ್' ಅನ್ನು ಅದೇ ಹೆಸರಿನಲ್ಲಿ ಕನ್ನಡದಲ್ಲಿ ಸಂಗ್ರಹಾನುವಾದವಾಗಿ ಪ್ರಕಟಿಸಿದ್ದಾರೆ.

ಐತಿಹಾಸಿಕ ಕಾದಂಬರಿಯಾದ 'ಕೆನಿಲ್‌ವರ್ಥ್' ಇಂಗ್ಲೆಂಡಿನ ರಾಣಿ ಒಂದನೇ ಎಲಿಜಬೆತ್‌ಳ ಆಳ್ವಿಕೆಯಲ್ಲಿ ನಡೆದ ಘಟನೆಗಳನ್ನು ಆಧರಿಸಿದ್ದು, ಐತಿಹಾಸಿಕ ಮತ್ತು ಕಾಲ್ಪನಿಕ ಅಂಶಗಳಿಂದ ಕೂಡಿರುವ ಈ ಕಾದಂಬರಿ ಇಂಗ್ಲೆಂಡಿನ ಹದಿನಾರರಿಂದ ಹದಿನೆಂಟನೆಯ ಶತಮಾನದ ಜನತೆಯ ಸಂಪ್ರದಾಯ, ಆಚಾರ, ವಿಚಾರ, ನಂಬಿಕೆ, ಸಂಪ್ರದಾಯ, ಮೂಢನಂಬಿಕೆ ಇತ್ಯಾದಿಗಳನ್ನು ಒಳಗೊಂಡ ಜೀವನ ಸಂಸ್ಕೃತಿಗಳನ್ನು ಚಿತ್ರಿಸುತ್ತದೆ.

'ಮಾರ್ಕೋಪೋಲೊ' ಪ್ರವಾಸ ಕಥನ ೧೯೫೬ರಲ್ಲಿ ಪ್ರಕಟವಾಯಿತು. ಇದು ಕನ್ನಡ ಪ್ರವಾಸ ಸಾಹಿತ್ಯ ಭಂಡಾರಕ್ಕೆ ನಾಗೇಗೌಡರು ಕೊಟ್ಟ ಅತ್ಯುತ್ತಮ ಕೊಡುಗೆ. ಇದು ಮಧ್ಯ ಏಷ್ಯಾದ ಅನೇಕ ಭಾಗಗಳ ಬಗ್ಗೆ, ವಿಸ್ತಾರವಾದ ಚೀನಾ ಸಾಮ್ರಾಜ್ಯದ ಬಗ್ಗೆ ಮಾರ್ಕೊಪೋಲೊ ಎಂಬ ಪ್ರವಾಸಿಯ ಪ್ರವಾಸ ಕಥನದ ಸಂಗ್ರಹವಾಗಿದೆ.

ಅವರು ಅನುವಾದ ಮಾಡಿದ ಮತ್ತೊಂದು ಮಹತ್ವದ ಕೃತಿ- ವೆರಿಯರ್ ಎಲ್ವಿನರ 'ಗಿರಿಜನ ಪ್ರಪಂಚ'. ಎಲ್ವಿನರು ಇಂಗ್ಲೆಂಡಿನಲ್ಲಿ ಹುಟ್ಟಿ ಭಾರತಕ್ಕೆ ಪಾದ್ರಿಯಾಗಿ ಬಂದವರು. ಗಾಂಧೀಜಿಯ ಪ್ರಭಾವಕ್ಕೆ ಒಳಗಾಗಿ ಭಾರತೀಯ ಸಂಸ್ಕೃತಿಗೆ ಮನಸೋತವರು. ಭಾರತೀಯ ಗಿರಿಜನರ ಬದುಕಿನ ಅಧ್ಯಯನ- ಉದ್ಧಾರಗಳಲ್ಲಿ ತೊಡಗಿಸಿಕೊಂಡವರು ಗಿರಿಜನಕನ್ಯೆಯನ್ನೆ ಮದುವೆಯಾಗಿ ಭಾರತದ ಪೌರತ್ವವನ್ನೂ ಪಡೆದು ಇಲ್ಲಿಯೇ ನೆಲೆನಿಂತ ಎಲ್ವಿನರು ಮೊದಲಿಗೆ ಮಾನವತಾವಾದಿ; ನಂತರದಲ್ಲಿ ಮಾನವ ವಿಜ್ಞಾನಿ. ಅವರ ಆತ್ಮಚರಿತ್ರೆಯೇ 'The Tribal world of verrier Elvin'. ಇಂತಹ ಮಹಾನ್ ವ್ಯಕ್ತಿಯ ಆತ್ಮಚರಿತ್ರೆಯನ್ನು ಕನ್ನಡಕ್ಕೆ ಅನುವಾದಿಸುವುದರ ಮುಖಾಂತರ ನಾಗೇಗೌಡರು ಮಾನವ ವಿಜ್ಞಾನ, ಜನಪದ, ಸಮಾಜ ವಿಜ್ಞಾನ ಕ್ಷೇತ್ರಗಳನ್ನು ಕನ್ನಡದಲ್ಲಿ ಅರಿಯಬಲ್ಲವರಿಗೆ ಮಹದುಪಕಾರ ಮಾಡಿದ್ದಾರೆ.

**'ಪ್ರವಾಸಿ ಕಂಡ ಇಂಡಿಯಾ'**: ಇದರ ಎಂಟು ಬೃಹತ್ ಸಂಪುಟಗಳಲ್ಲಿ ನಾಗೇಗೌಡರು ಓದುಗರಿಗೆ ಸಾಹಿತಿಗಳಾಗಿ, ವಿಮರ್ಶಕರಾಗಿ, ಇತಿಹಾಸಕಾರರಾಗಿ ಮತ್ತು ಭಾಷಾಂತರಕಾರರಾಗಿ ಗೋಚರಿಸುತ್ತಾರೆ. ಅನಾದಿಕಾಲದಿಂದ ಜಗತ್ತಿನ ನಾನಾ ಮೂಲೆಗಳಿಂದ, ನಾನಾ ಕಾರಣಗಳಿಗಾಗಿ ಭಾರತಕ್ಕೆ ಪ್ರವಾಸಿಗರು ಬಂದು ತಾವು ಕಂಡುಂಡ ಅನುಭವಗಳನ್ನು ಬರಹದ

ರೂಪದಲ್ಲಿರಿಸಿರುವ ಹಲವು ಕುತೂಹಲಕಾರಿ ಸಂಗತಿಗಳು ಇಲ್ಲವೆ. ಭಾರತದ ಭೌಗೋಳಿಕ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಿಕ, ಧಾರ್ಮಿಕ ಮೊದಲಾದ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಅಪರೂಪದ ವಿಷಯಗಳು ಇಲ್ಲಿವೆ. ಈ ಹಿನ್ನೆಲೆಯಲ್ಲಿ ಇತಿಹಾಸ, ಸಂಸ್ಕೃತಿ, ಕಲೆ, ಸಾಹಿತ್ಯ, ವಿಜ್ಞಾನ ಮತ್ತು ಮಾನವಿಕ ವಿಜ್ಞಾನಗಳ, ಅಧ್ಯಯನ ಸಂಶೋಧನೆಯಲ್ಲಿ ತೊಡಗಿರುವವರಿಗೆ ಈ ಸಂಪುಟಗಳು ಆಕರಗ್ರಂಥಗಳೆನಿಸುತ್ತವೆ.

**ಸೃಜನಶೀಲ ಕೃತಿಗಳು:**

೧ **ನಾನಾಗುವೆ ಗೀಜಗನ ಹಕ್ಕಿ–** ಗೌಡರ ಸ್ವರಚಿತ ಹಾಗೂ ಅನುವಾದಿತ ಕವನಗಳ ಸಂಕಲನ. ವಸ್ತು, ಧಾಟಿ, ಧೋರಣೆಗಳಲ್ಲಿ ಜನಪದ ಕಾವ್ಯಕ್ಕೆ ಹತ್ತಿರವಾದ ಕಾವ್ಯಗಳನ್ನು ಇಲ್ಲಿ ಹೆಚ್ಚಾಗಿಯೇ ಕಾಣಬಹುದು.

೨ **ಕಥೆವ್ಯಥೆ:** ಎಂಟು ನೀಳ್ಗವನಗಳನ್ನು ಒಳಗೊಂಡಿರುವ ಕವನ ಸಂಕಲನ

೩ **ಕಂಡುಕೇಳಿದ ಕಥೆಗಳು:** ನಾಗೇಗೌಡರ ಮೊದಲ ಕಥಾಸಂಕಲನ; ತಾವು ಕಂಡಿದ್ದನ್ನು ಮತ್ತು ಇತರರಿಂದ ಕೇಳಿದ್ದನ್ನು ಕಥೆಯಾಗಿಸಿರುವ, ಎಲ್ಲಿಯೂ ಕಲ್ಪನೆಯಿಲ್ಲದ ಯಥಾವತ್ ಚಿತ್ರಣ.

೪ **ಖೈದಿಗಳ ಕಥೆಗಳು:** ಇದೊಂದು ವಿಶಿಷ್ಟ ಕೃತಿ. ಯಾವುದೋ ಸಂದರ್ಭ, ಒತ್ತಡಗಳಿಗೆ ಮಣಿದು ಕಳ್ಳತನ, ದರೋಡೆ, ಅತ್ಯಾಚಾರ, ಕೊಲೆಗಳನ್ನು ಮಾಡಿ, ಜೈಲುಸೇರಿದವರ ಕರುಣಾಜನಕ, ಕೌತುಕಮಯ ಕಥೆಗಳ ಸಂಕಲನ.

೫ **ದೊಡ್ಡಮನೆ:** ಗುಣ –ಗಾತ್ರಗಳೆರಡರಲ್ಲೂ ಬೃಹತ್ತಾದ ಕಾದಂಬರಿ. ಬಯಲು ಸೀಮೆಯ ರೈತಾಪಿ ಬದುಕಿನ, ನಶಿಸುತ್ತಿರುವ ಸಂಸ್ಕೃತಿಯ ಚಿತ್ರಣ ಇದರಲ್ಲಿದೆ.

೬ **ಸೊನ್ನೆಯಿಂದ ಸೊನ್ನೆಗೆ**: ಜನಪದ ಗಾದೆ ಹಾಗೂ ಕಥೆಯೊಂದರ ಎಳೆ ಹಿಡಿದು ಹುಟ್ಟಿಕೊಂಡ ಈ ಕಾದಂಬರಿಯ ಆಶಯ ಕೆಟ್ಟವರು ಕೊನೆಗೆ ಕೆಟ್ಟದ್ದನ್ನೇ ಅನುಭವಿಸುತ್ತಾರೆ ಎಂಬುದು.

೭ **ಭೂಮಿಗೆ ಬಂದ ಗಂಧರ್ವ:** ಸಂಗೀತ ಸಾಮ್ರಾಟ್ ಭೈರವಿರಾಗಕ್ಕೆ ಹೆಸರಾದ ಕೆಂಪೇಗೌಡರನ್ನು ಕುರಿತ ಐತಿಹಾಸಿಕ ಕಾದಂಬರಿ.

೮ **ನನ್ನೂರು:** ನಾಗೇಗೌಡರ ಹುಟ್ಟೂರಾದ ಹೆರಗನಹಳ್ಳಿಯ ಕಳೆದುಹೋದ ಸಮುದಾಯದ ಬದುಕಿನ ಚಿತ್ರಣ. ನನ್ನೂರು ಒಂದು ಸಾಂಕೇತಿಕ ಅಷ್ಟೆ. ಗ್ರಾಮೀಣ ಜೀವನದ ಅಪೂರ್ವ ಪರಿಚಯದ ಕೃತಿಯಿದು.

೯ **ಬೆಟ್ಟದಿಂದ ಬಟ್ಟಲಿಗೆ:** ಕಾಫಿಯ ಉಗಮ, ವಿಲಾಸ, ವ್ಯಾಪ್ತಿ, ವೈಶಿಷ್ಟ್ಯಗಳನ್ನು ಅಂಕಿ–ಅಂಶಗಳೊಡನೆ ಸರಳವಾಗಿ ನಿರೂಪಿಸುವ ಈ ಕೃತಿ ನಾಗೇಗೌಡರು ಕನ್ನಡ ಸಾಹಿತ್ಯಕ್ಕೆ ನೀಡಿದ ಅಪರೂಪದ ಕೊಡುಗೆ.

೧೦ **ಸರೋಜಿನಿ ದೇವಿ:** ಭಾರತದ ಸ್ವಾತಂತ್ರ್ಯ ಹೋರಾಟಗಾರ್ತಿ, ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷತೆ ವಹಿಸಿದ ಭಾರತದ ಪ್ರಥಮ ಸ್ತ್ರೀ, ಪ್ರಸಿದ್ಧ ಭಾಷಣಗಾರ್ತಿ, ಕವಯಿತ್ರಿ, ಭಾರತದ ಕೋಗಿಲೆ ಸರೋಜಿನಿ ದೇವಿಯವರನ್ನು ಕುರಿತು ನಾಗೇಗೌಡರು ಬರೆದ ಜೀವನ ಚರಿತ್ರೆಯಿದು.

೧೧ **ನಾ ಕಂಡ ಪ್ರಪಂಚ:** ಇದು ನಾಗೇಗೌಡರು ಪ್ರವಾಸ ಮಾಡಿದ ಸಿಂಹಳ, ಹಾಂಕಾಂಗ್, ಮಲೇಶಿಯಾ, ಸಿಂಗಾಪುರ, ಥೈಲ್ಯಾಂಡ್, ಜಪಾನ್, ಬ್ರಿಟನ್, ಅಮೆರಿಕ ದೇಶಗಳ ಪ್ರವಾಸ ಕಥನವಾಗಿದೆ.

**ಜಾನಪದ:** ನಾಗೇಗೌಡರ ಮತ್ತೊಂದು ಆಸಕ್ತ ಕ್ಷೇತ್ರ ಜಾನಪದ. ನಾಗೇಗೌಡರರೆಂದರೆ ಜಾನಪದ; ಜಾನಪದವೆಂದರೆ ನಾಗೇಗೌಡರು. ಕನ್ನಡ ಜಾನಪದಕ್ಕೆ ಅವರು ಸಲ್ಲಿಸಿರುವ ಸೇವೆ ಅವಿಸ್ಮರಣೀಯವಾಗಿದೆ. ಸಾಂಸ್ಥಿಕವಾಗಿ, ಸಾಹಿತ್ಯಿಕವಾಗಿ, ಸಾಂಘಿಕವಾಗಿ ಜಾನಪದಕ್ಕೆ ಅವರು ನೀಡಿರುವ ಕೊಡುಗೆ ಅತ್ಯಂತ ಅಮೂಲ್ಯವಾದುದು. ಇವರನ್ನು ಜಿ.ಎಸ್.ಸಿದ್ದಲಿಂಗಯ್ಯ ಅವರು 'ಜಾನಪದ ಬ್ರಹ್ಮ' ಎಂದಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪಕರಲ್ಲಿ ಒಬ್ಬರಾದ ಬಿ.ಎಂ.ಶ್ರೀಕಂಠಯ್ಯ ಅವರು 'ಜನವಾಣಿ ಬೇರು ಕವಿವಾಣಿ ಹೂವು' ಎಂಬುದಾಗಿ ಹೇಳಿದ್ದರೂ ಜನಪದ ಸಾಹಿತ್ಯ ಪರಿಷತ್ತಿನ ನಡುಮನೆಯನ್ನೂ ಪ್ರವೇಶಿಸಿರಲಿಲ್ಲ. ಅದು ತಲೆಬಾಗಿಲಿನಾಚೆ ಬಹಳ ಅಂದರೆ ಒಳಗಡೆ ದನದ ಕೊಟ್ಟಿಗೆಯಲ್ಲಿ ಕಾಲ ಹಾಕಬೇಕಾಗಿತ್ತು. ಜನಪದ ಸಾಹಿತ್ಯದ ಮಲ್ಲಿಗೆಯ ಪರಿಮಳವನ್ನು ಆಘ್ರಾಣಿಸುತ್ತಾ ಆ ಪರಿಮಳಕ್ಕೆ ಮನಸೋತವರು ಶಿಷ್ಟಸಾಹಿತಿಗಳಲ್ಲೂ ಕೆಲವರು ಇದ್ದರೂ ಅದು ಹೊಲೆಮಾದಿಗರ ಹಟ್ಟಿಯಲ್ಲಿ ಹುಟ್ಟಿದ್ದೆಂದೋ ಅಥವಾ ಶೂದ್ರರು ಮುಟ್ಟಿದ್ದೆಂದೋ ಮಡಿಸಾಹಿತಿಗಳು ಭಾವಿಸಿದ ಕಾಲ ಒಂದಿತ್ತು. ಮೂರು ನಾಲ್ಕು ವರ್ಷಕ್ಕೊಮ್ಮೆ ನಡೆಯುತ್ತಿದ್ದ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲೂ ಜನಪದ ಸಾಹಿತ್ಯ ಅಷ್ಟೊ ಇಷ್ಟೊ ಚರ್ಚೆಯ ವಿಷಯವಾಗುತ್ತಿತ್ತು ಅಷ್ಟೆ. ಹೀಗಿರುವಾಗ ಜನಪದ ಸಾಹಿತ್ಯ ಸಂಗ್ರಹದಲ್ಲಿ ಆಗಲೇ ತೊಡಗಿಸಿಕೊಂಡಿದ್ದ ಗೌಡರು, ಜನಪದ ಸಾಹಿತ್ಯ ಪ್ರೇಮಿಯೂ ಆಗಿದ್ದ ಗೊ.ರು.ಚನ್ನಬಸಪ್ಪ ಹಾಗೂ ಜಿ.ನಾರಾಯಣ ಅವರ ಸುಪ್ತ ಮನಸ್ಸಿನಲ್ಲಿದ್ದುಕೊಂಡು ಹೊರಬರಲು ಚಡಪಡಿಸುತ್ತಿದ್ದ ಜನಪದ ಸಾಹಿತ್ಯಪ್ರೇಮ ಪ್ರಕಟವಾಗಲು ಅನುವುಮಾಡಿಕೊಟ್ಟರು.

ಗೌಡರು ತರೀಕೆರೆಯಲ್ಲಿ ನಡೆದ ಪ್ರಥಮ ಜಾನಪದ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಎರಡನೆಯದು ಮಂಗಳೂರಿನಲ್ಲೂ ಮೂರನೆಯ ಸಮ್ಮೇಳನ ನಾಗಮಂಡಲದಲ್ಲೂ ನಡೆದವು.

೨೦೦೩ರಲ್ಲಿ ಚುಂಚಶ್ರೀ ಪ್ರಶಸ್ತಿ.

೨೦೦೪ರಲ್ಲಿ ಪಂಪ ಪ್ರಶಸ್ತಿ.

'ನಾಗಸಿರಿ' ಎಂಬುದು ಅವರ 'ಆತ್ಮಕಥೆ'. ನಾಗೇಗೌಡರು ಒಬ್ಬ ವ್ಯಕ್ತಿಯಲ್ಲ, ಸಂಸ್ಥೆ. ಒಂದು ಸಂಸ್ಥೆ ಮಾಡುವಂಥದ್ದನ್ನು ಒಬ್ಬ ವ್ಯಕ್ತಿ ಮಾಡಿರುವುದು ಅಚ್ಚರಿಯ ಸಂಗತಿಯೇ ಸರಿ. "ನಾಗೇಗೌಡರದು ಬಹುಮುಖ ಪ್ರತಿಭೆ: ಬಹುಮುಖ ಸಾಧನೆ. ಒಂದು ಕೈಯಲ್ಲಿ ಆಡಳಿತ ಸೂತ್ರವನ್ನೂ ಮತ್ತೊಂದು ಕೈಯಲ್ಲಿ ಲೇಖನಿಯನ್ನೂ ಹಿಡಿದು ಶ್ರೀಸಾಮಾನ್ಯರ ಮತ್ತು ಸಾಹಿತ್ಯ ಸಂಸ್ಕೃತಿಯ ಸೇವೆಯನ್ನು ಸಮರ್ಥವಾಗಿ ನಿರ್ವಹಿಸಿದವರು........"[೧] ಎಂಬ ಹೆಗ್ಗಳಿಕೆಯ ಮಾತುಗಳು ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿವೆ. ಹೀಗೆ ಸಾಹಿತ್ಯದ ಹಲವಾರು ಕ್ಷೇತ್ರಗಳಲ್ಲಿ ಕೃಷಿ ಮಾಡಿ ಕನ್ನಡ ಸಾಹಿತ್ಯಲೋಕವನ್ನು ಶ್ರೀಮಂತಗೊಳಿಸಿದ ಅಪರೂಪದ ವ್ಯಕ್ತಿಯಾಗಿದ್ದಾರೆ ನಾಗೇಗೌಡರು.

--

---

೧. ಸಾಲುದೀಪಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಮೂರನೆಯ ಮುದ್ರಣ, ೨೦೦೧ ಸಂಪಾದಕರು: ಜಿ.ಎಸ್.ಸಿದ್ದಲಿಂಗಯ್ಯ, ಎಂ.ಎಚ್.ಕೃಷ್ಣಯ್ಯ, ಎಚ್.ಎಲ್.ನಾಗೇಗೌಡ, ಚಕ್ಕೆರೆ ಶಿವಶಂಕರ್ ಅವರ ಲೇಖನ

## ಅಧ್ಯಾಯ : ನಾಲ್ಕು

# ಸೊನ್ನೆಯಿಂದ ಸೊನ್ನೆಗೆ – ಒಂದು ಜಾನಪದೀಯ ಅಧ್ಯಯನ

**'ಸೊನ್ನೆ**ಯಿಂದ ಸೊನ್ನೆಗೆ' ಕಾದಂಬರಿ ಎಚ್.ಎಲ್.ನಾಗೇಗೌಡ ಅವರ ಎರಡನೆಯ ಕಾದಂಬರಿ. ಇದು ಗ್ರಾಮೀಣ ಬಾಳಿನ ಚಿತ್ರಣದಿಂದ ಕೂಡಿದೆ. ಮಂಡ್ಯದ ಸುತ್ತಮುತ್ತಲ ಪ್ರದೇಶದ ಪರಿಸರದಲ್ಲಿ ಕಥೆ ಹೆಣೆದುಕೊಂಡು ಅರಳಿ ನಿಂತಿದೆ. ಮಂಡ್ಯದ ಕಡೆಯವರಿಂದ (ಕೆ.ಸಿ.ವೀರೇಗೌಡ ಅವರು ಮಂಡ್ಯ ಜಿಲ್ಲೆಯ ಕೀಲಾರ ಗ್ರಾಮದವರು) ಕೇಳಿದ ಕಥೆಯಾದ್ದರಿಂದ ಅಲ್ಲಿನ ಪ್ರದೇಶದ ಪರಿಸರದಲ್ಲಿ ಈ ಕೃತಿಯನ್ನು ಬೆಳೆಸಿದ್ದಾರೆ. ''ಬಯಲು ಸೀಮೆಯ ಗ್ರಾಮಾಂತರ ಪ್ರದೇಶದಲ್ಲಿ ಯಾರನ್ನಾದರೂ ಬಯ್ಯಬೇಕಾದರೆ, 'ನಿನ್ನಮನೆ ಧೂಪದ ಚನ್ನನ ಮನೆಯಂತಾಗ!' ಎಂಬ ಮಾತನ್ನು ಬಳಸಿ ಬಯ್ಯುತ್ತಾರೆ. ಈ 'ಧೂಪದ ಚನ್ನ' ಯಾರು? ಎಂದು ನಾನು ಅಲ್ಲಿ ಇಲ್ಲಿ ವಿಚಾರಿಸಿದಾಗ ಅದ್ಧೂರಿಯಾಗಿ ಬಾಳಿ ಬದುಕಿ ಕೊನೆಗೆ ನಿರ್ಗತಿಕನಾದ ಒಬ್ಬ ವ್ಯಕ್ತಿಯಾಗಿರಬೇಕು.''.......... ಆತನೊಬ್ಬ ಐತಿಹಾಸಿಕ ವ್ಯಕ್ತಿಯಾಗಿರ–ಬಹುದಾದ ಕಾರಣ..........''[೧] ಕಥೆಯನ್ನು ಶತಮಾನದಷ್ಟು ಹಿಂದಕ್ಕೆ ಸರಿಸಿ, ಕಥಾನಾಯಕನಿಗೆ 'ಧೂಪದಚನ್ನ' ಎಂದೇ ಹೆಸರನ್ನು ಕೊಟ್ಟಿದ್ದಾರೆ.

ಬದುಕಿನಲ್ಲಿ ಬಡತನ–ಸಿರಿತನ ಶಾಶ್ವತವಲ್ಲ. ಅದು ಬಂದುಹೋಗುವಂತಹದ್ದು. ಆದಾಗ್ಯೂ ಒಬ್ಬ ವ್ಯಕ್ತಿಯ ಶ್ರೀಮಂತಿಕೆಯ ಹಿಂದೆ ಅದೆಷ್ಟೋ ಜನರ ಬೆವರು, ನಿಟ್ಟುಸಿರು ಇರುತ್ತದೆ. ಅನ್ಯರ ನಿಟ್ಟುಸಿರಿನ ಫಲದಿಂದ ದೊರೆತ ಸಂಪತ್ತು ಒಂದಿಲ್ಲೊಂದು ದಿನ ಕೈತಪ್ಪಿ ಹೋಗಬಹುದು. ಈ ತತ್ವದ ಬುನಾದಿಯ ಮೇಲೆ ಈ ಕಾದಂಬರಿ ನಿಂತಿದೆ. ''ಮಾಡಿದುಣ್ಣೋ ಮಾರಾಯ'' ಎಂಬ ಹಿರಿಯಸೂಕ್ತಿ ಉಂಟು. ಅದು ಈ ಕಾದಂಬರಿಯಲ್ಲಿ ವ್ಯಕ್ತಗೊಂಡಿರುವುದನ್ನು ಓದುಗರು ಅರಿಯಬಹುದು. ಇನ್ನೊಂದು ನಾವು ಕಾಣುವ ಸತ್ಯ ಸಂಗತಿ ಇದೆ. ಅದೇನೆಂದರೆ ಬೆವರು ಸುರಿಸಿ ಯಾರೂ ಬಲ್ಲಿದನಾಗುವುದಿಲ್ಲ. ಶ್ರೀಮಂತಿಕೆ ದುಡಿಮೆಯಿಂದ ಬರುವುದಿಲ್ಲ ಎಂಬುದು.......''[೨] ನಿರ್ಗತಿಕನಾಗಿ ಹುಟ್ಟಿ ಅನಾಯಾಸವಾಗಿ ಸಿಕ್ಕಿದ ಯಾರದೋ ಹಣದಿಂದ ಶ್ರೀಮಂತನಾಗಿ ಬಾಳಿ ಅಂತಿಮವಾಗಿ ದುರ್ವ್ಯಸನಕ್ಕಿಳಿದು ತನ್ನ ಎಲ್ಲಾ ಸಂಪತ್ತನ್ನು ಕಳೆದುಕೊಂಡು ಪೂರ್ವಸ್ಥಿತಿಗೆ ಮರಳಿದ ವ್ಯಕ್ತಿಯೊಬ್ಬನ ಬದುಕೇ ಈ ಕಾದಂಬರಿಯ ವಸ್ತು.

ಈ ಕಾದಂಬರಿಯ ನಾಯಕ ಐತಿಹಾಸಿಕ ವ್ಯಕ್ತಿಯಾಗಿದ್ದಿರಬಹುದಾದ ಧೂಪದ ಚನ್ನೇಗೌಡ. ಇವನ ಪೂರ್ವಿಕರು ಎಲ್ಲಿಂದಲೋ ಮೈಲಾರಕ್ಕೆ ಬಂದು ನೆಲೆಸಿದವರು. ಧೂಪದ

---

೧. ಸೊನ್ನೆಯಿಂದ ಸೊನ್ನೆಗೆ, ಪರಿಷ್ಕೃತ ಮುದ್ರಣ, ೧೯೭೮, ಪೀಠಿಕೆ– ಪು. v

೨. ಅದೇ, ಪೀಠಿಕೆ– ಪು. vi

ಚನ್ನೇಗೌಡನ ತಾತನಾದ 'ಚನ್ನ' ಮೈಲಾರದ ಚಾಜಗಾರ ಕುಳ್[೧] (ಊರಿನ ಅಣ್ಣತಮ್ಮತನಕೆ ಸೇರದೆ ಇದ್ದವನು ಎಂದರ್ಥ). ಇವನು ದೇವರ ದುಡ್ಡನ್ನು ತಿಂದು ಕಾಲಾನಂತರ ಸತ್ತುಹೋಗುತ್ತಾನೆ. ದೇವರ ದುಡ್ಡು ತಿಂದುದ್ದಕ್ಕೊ ಏನೋ ಕಾಕತಾಳೀಯವೆಂಬಂತೆ ಚನ್ನನ ಮೊದಲನೆಯ ಮಗ ಮೂಡ್ಲಪ್ಪ ಮೂಡ್ಲ ಸೀಮೆಗೆ ಹೋದವನು ಅಲ್ಲಯೇ ವಾಂತಿಭೇದಿಯಾಗಿ ಸಾಯುತ್ತಾನೆ. ಎರಡನೆಯ ಮಗ ಕುರುಡನಾಗುತ್ತಾನೆ. ಮೂಡ್ಲಪ್ಪನ ಮಗನೇ ಈ ಕಾದಂಬರಿಯ ನಾಯಕ ಚನ್ನೇಗೌಡ. ಎಳೆವಯಸ್ಸಿನಲ್ಲಿಯೇ ಎಲ್ಲರನ್ನೂ ಕಳೆದುಕೊಂಡು, ಹತ್ತು ವರ್ಷದವರೆಗೆ ತನ್ನ ಚಿಕ್ಕಪ್ಪ ಕುಂಡಪ್ಪನ ಆಶ್ರಯದಲ್ಲಿ ಹಾಗೂ ಹೀಗೂ ಬೆಳೆದು ಕಾಲಸಾಗಿಸುತ್ತಿರುವಾಗ ಕುಂಡಪ್ಪನೂ ಸಾಯುತ್ತಾನೆ. ಅನಾಥ ಚನ್ನ ಅದೇ ಊರಿನ ಪರೋಪಕಾರಿಗಳೆನಿಸಿದ್ದ ಮಲ್ಲೇಗೌಡರ ಮನೆಯಲ್ಲಿ ಬೆಳೆಯುತ್ತಾನೆ. ಮುಂದೆ ಅವರ ಸಲಹೆಯಂತೆ ನಡೆದು ಮದುವೆ ಮಾಡಿಕೊಂಡು (ಮಲ್ಲೇಗೌಡರ ಮನೆಯಲ್ಲಿ ಕೆಲಸ ಮಾಡಿಕೊಂಡಿದ್ದ ಚೌಡಿಯನ್ನು) ಎಷ್ಟೋ ವರ್ಷಗಳ ಹಿಂದೆ ಆರಿಹೋಗಿದ್ದ ತನ್ನ ಮನೆಯ ದೀಪ ಹಚ್ಚುತ್ತಾನೆ. ಒಕ್ಕಲುತನದ ಜೊತೆಗೆ ಸೌದೆ ಕಡಿದು ಮಾರುವುದು, ತನ್ನ ಊರು ಮೈಲಾರದಿಂದ ಮೈಸೂರಿಗೆ ಬಾಡಿಗೆಗೆ ಗಾಡಿ ಹೊಡೆಯುವುದು, ಹುಣಸೇಹಣ್ಣು, ಅವರೇಕಾಳುಗಳನ್ನು ಮಾರುವುದು, ದನಕರುಗಳ ಮಾರಾಟ ಹೀಗೆ ಸಣ್ಣಮಟ್ಟ ವ್ಯಾಪಾರ – ವ್ಯವಹಾರದಿಮದ ನಾಲ್ಕು ಕಾಸು ಸಂಪಾದಿಸುತ್ತಾನೆ. ನಿರ್ಗತಿಕನಾಗಿದ್ದಾಗ 'ಚನ್ನ' ಎನ್ನಿಸಿಕೊಂಡಿದ್ದವನು, ವ್ಯಾಪಾರದಿಂದಾಗಿ 'ಚನ್ನಯ್ಯ'ನಾಗುತ್ತಾನೆ. ಆಕಸ್ಮಿಕವಾಗಿ ದೊರೆತ ಭಾರಿ ಹಣದಿಂದ ಶ್ರೀಮಂತನಾಗಿ ಚನ್ನಯ್ಯ 'ಚನ್ನೇಗೌಡ'ನಾಗುತ್ತಾನೆ. ಹಲವಾರು ವರ್ಷಗಳ ಕಾಲ ದಾನ,ಧರ್ಮ ಮಾಡಿ ಊರಿನವರಿಂದ 'ಸಾಹುಕಾರ್‍ರು' ಎಂದು ಕರೆಸಿಕೊಳ್ಳುವ ಚನ್ನೇಗೌಡ ಹೆಂಡತಿ ಸತ್ತ ಮೇಲೆ ದುರ್ವ್ಯಸನಕ್ಕೆ ಒಳಗಾಗಿ ತನ್ನ ಅಷ್ಟೈಶ್ವರ್ಯವನ್ನೂ ಕಳೆದುಕೊಂಡು ಸನ್ಯಾಸಿಯಾಗುತ್ತಾನೆ.

'ದುಡಿದ ದುಡ್ಡಷ್ಟೇ ದಕ್ಕುವುದು', 'ಅಕ್ರಮ ಆಸ್ತಿ ಉಳಿಯಲಾರದು' ಎಂಬ ತತ್ವದಲ್ಲಿ ಭಾರತೀಯರಿಗೆ ಅಚಲವಾದ ನಂಬಿಕೆಯಿದೆ. ಈ ನಂಬಿಕೆಗೆ ಕಾದಂಬರಿ ಬೆಂಬಲವಾಗಿದೆ. ಹಾಗೆಯೇ ನಮ್ಮ ಸಮಾಜದಲ್ಲಿ ಬಡವನ ಸ್ಥಾನ ಎಂತಹುದು, ಬಲ್ಲಿದವನ ಸ್ಥಾನ ಎಂತಹುದು ಎಂದು ಚನ್ನನ ಪಾತ್ರದ ಮೂಲಕ ತಿಳಿಯುತ್ತದೆ. ಶ್ರೀಮಂತರಾಗಿದ್ದ ಮೈಸೂರಿನ ಮಂಡಿವರ್ತಕ ಸುಬ್ಬಣ್ಣನವರು ಸೂಳೆಯರ ಸಹವಾಸ ಮಾಡಿ ಎಲ್ಲವನ್ನೂ ಕಳೆದುಕೊಳ್ಳುತ್ತಾರೆ. ಕಾದಂಬರಿ–ಯಲ್ಲಿ ಪ್ರಧಾನವಾಗಿರುವುದು ಜಾನಪದರ ಶಾಸ್ತ್ರ, ಶಕುನಗಳ ನಂಬಿಕೆ, 'ಕೆಟ್ಟವರಿಗೆ ಕೊನೆಗೆ ಕೆಟ್ಟದ್ದೇ ಆಗುತ್ತದೆ, ಒಳ್ಳೆಯವರಿಗೆ ಒಳ್ಳೆಯದೇ ಆಗುತ್ತದೆ' ಎಂಬ ನೀತಿ. ನಾಗೇಗೌಡರ ಉತ್ಕಟತೆಯಿರುವುದು ಅವರು ಕಟ್ಟಿಕೊಡುವ ಜನಪದ ಸಂಸ್ಕೃತಿಯ ಚಿತ್ರಣದಲ್ಲಿ. ಕಂಡುಂಡ

---

೧. ಸೊನ್ನೆಯಿಂದ ಸೊನ್ನೆಗೆ, ಪು. ೨೦

ಬದುಕನ್ನು ಲವಲವಿಕೆಯಿಂದ ರಸವತ್ತಾಗಿ ವರ್ಣಿಸುವ ಕಲೆ ಅವರಿಗೆ ಸಿದ್ಧಿಸಿದೆ. ಹಾಗಾಗಿ ನಾಗೇಗೌಡರು ಕೇಳಿ ತಿಳಿದ ಕಥೆಯನ್ನು ಇಲ್ಲಿ ಪುನರ್ ಸೃಷ್ಟಿಸಿದ್ದಾರೆ.

ಉದಾಹರಣೆಗೆ, ಕುಂಡಪ್ಪನ ಬದುಕು, ನಾಯಕನ ವಿವಿಧ ಅವಸ್ಥಾಂತರಗಳ ಚಿತ್ರಣ, ಮಲ್ಲೇಗೌಡರ ಉದಾರತೆ ಇಂತಹ ಪ್ರಸಂಗಗಳು, ಸನ್ನಿವೇಶಗಳು ಅನುಭವಿಸಬಹುದಾದಷ್ಟು ದಟ್ಟವಾಗಿವೆ. ಈ ರೀತಿಯ ನೈಜತೆಗೆ ಅದರ ಜನಪದ ಜೀವನಾನುಭವ ಮತ್ತು ಆ ಸಂಸ್ಕೃತಿಯ ಅನಂತಮುಖಗಳ ನೇರಪರಿಚಯವೇ ಕಾರಣವಾಗಿದೆ.

ಜನಪದರಿಗೆ ದೈವಭಕ್ತಿ ಮತ್ತು ಗುರುಹಿರಿಯರಲ್ಲಿದ್ದ ನಂಬಿಕೆ, ಬದುಕಿನಲ್ಲಿ ನೇಮ ನಿಯತ್ತುಗಳೇ ಪರಮಪ್ರಧಾನವಾದ ನೈತಿಕ ಮೌಲ್ಯಗಳು. ಅದೇ ಕಾದಂಬರಿಯ ನೆಲೆಗಟ್ಟೂ ಆಗಿದೆ. ಎಂತಲೇ ಗ್ರಾಮದ ಹಿರೀಕ ದೊಡ್ಡ ಕೆಂಚೇಗೌಡರು ಕೊಟ್ಟ ಶಾಪ 'ದ್ಯಾವರಗಂಟು ತಿಂದೋನ ಮನೆ ಎಕ್ಕುಟ್ಟೋಗ್ಲಿ' ' ಅವನ ಮನೆ ಹಾಳಾಗೋಗ್ಲಿ'[೧] ಎಂಬುದು ಕೊನೆಗೂ ದಿಟವಾಗಿಬಿಡುತ್ತದೆ. 'ಚನ್ನಯ್ಯನ ಕುಟುಂಬ ಸರ್ವಸ್ವವೂ ನಾಲ್ಕು ತಲೆಗಳವರೆಗೆ ನಾನಾ ಕೋಟಲೆ, ಅಪಮಾನಗಳಿಗೆ ಸಿಕ್ಕಿ ನವೆದು, ನೊಂದು ಕೊನೆಗೆ ದುರಂತದಲ್ಲಿ ಪರ್ಯವಸಾನವಾಗುತ್ತದೆ'[೨] ಎನ್ನುವಲ್ಲಿ ಕಾದಂಬರಿ ಏರಿಳಿತ ಅಥವಾ ಜೀವನ ಚಕ್ರ ತಲತಲಾಂತರಗಳಲ್ಲಿ ಯಥಾಸ್ಥಿತಿಗೆ ಬರುವುದನ್ನು ಗುರುತಿಸಲಾಗಿದೆ. 'ಸೊನ್ನೆಯಿಂದ ಸೊನ್ನೆಗೆ' ಕಾದಂಬರಿಯಲ್ಲಿ ನೈತಿಕಮೌಲ್ಯ ಕುರಿತ ಜಿಜ್ಞಾಸೆಯಿದೆ. ಅದರ ಜೊತೆಜೊತೆಗೆ ಗ್ರಾಮೀಣ ಜನರ ಬಾಳಿನ ನಡೆ-ನುಡಿ, ಆಚಾರ-ವಿಚಾರ, ನಂಬಿಕೆ-ನಡವಳಿಕೆಗಳು ಅಗ್ರಸ್ಥಾನ ಪಡೆದುಕೊಂಡಿವೆ. ಗ್ರಾಮೀಣ ಜನತೆಯ ಸಹಜವಾದ ಪರೋಪಕಾರಿ ಗುಣವನ್ನು ಮಲ್ಲೇಗೌಡರ ಮೂಲಕ ಚಿತ್ರಿಸಿಕೊಡುತ್ತಾರೆ. ಬೇಸಾಯದ ವಿಚಾರಗಳು, ಗರತಿಯ ಲಕ್ಷಣಗಳು, ಜನಪದ ನಂಬಿಕೆಗಳು, ಭಾಷಾವೈವಿಧ್ಯ ಈ ಎಲ್ಲವೂ ಸೇರಿ ಒಂದು ವೈಶಿಷ್ಟ್ಯಪೂರ್ಣವಾದ ಪ್ರಾದೇಶಿಕ ಕಾದಂಬರಿಯಾಗಿದೆ.

ಕಾದಂಬರಿಯ ನಾಯಕ ಹುಟ್ಟುವಾಗ ಪಡೆದುಕೊಂಡು ಬಂದದ್ದು ಏನೂ ಇಲ್ಲ(ಸೊನ್ನೆ). ಭಾರೀ ಶ್ರೀಮಂತನಾಗಿ ಬದುಕಿದರೂ ಕೊನೆಗೆ ಉಳಿದದ್ದೂ ಸೊನ್ನೆ. ಹಾಗಾಗಿ ಕಾದಂಬರಿಗೆ ಈ ಹೆಸರು ಅನ್ವರ್ಥವಾಗಿದೆ. ''ಪಾಶ್ಚಾತ್ಯ ವಿಚಾರಗಳಿಗೆ ಅಂಟಿಕೊಂಡು ಕೆಲವು ಸಿದ್ಧಾಂತಗಳಿಗೆ ಬದ್ಧರಾಗಿರುವ ಲೇಖಕರು ಮತ್ತು ವಿಮರ್ಶಕರು ಒಟ್ಟಾರೆ ಈ ಕಾದಂಬರಿಯನ್ನು ಮೆಚ್ಚುತ್ತಾರೋ ಇಲ್ಲವೋ. ಆದರೂ ಗ್ರಾಮೀಣ ಜನರ ಮನೋಭೂಮಿಕೆಯಲ್ಲಿ ಮೂಡಿಬಂದಿರುವ ಈ ಕೃತಿಯ

---

೧. ಸೊನ್ನೆಯಿಂದ ಸೊನ್ನೆಗೆ, ಪು. ೨೮

೨. ನಾಗವಲ್ಲಿ – ಶ್ರೀನಾಗೇಗೌಡ ಗೌರವ ಗ್ರಂಥ, ೧೯೭೯, ಸಂಪಾದಕರು: ಡಾ. ಜೀ.ಶಂ.ಪ. – ಹ.ಕ.ರಾಜೇಗೌಡ, ಪ್ರಧಾನ ಗುರುದತ್ತ, ಲೇಖನ ಸೊನ್ನೆಯಿಂದ ಸೊನ್ನೆಗೆ, ಸೀಳುನೋಟ, ನಂ.ತಪಸ್ವೀಕುಮಾರ್.

ಶೈಲಿ, ಅದರ ಮಾತಿನ ಬಳಕೆ, ಗಾದೆಮಾತುಗಳ ಪ್ರಯೋಗ. 'ಮಣ್ಣಿನ ವಾಸನೆ'ಯಿಂದ ಕೂಡಿದೆ"[೧]

ಇಂತಹ 'ಕೃತಿ' ನಾಗೇಗೌಡರ ಲೇಖನಿಯಿಂದ ಮಾತ್ರ ಸಾಧ್ಯ. ಹಳ್ಳಿಯ ಬದುಕನ್ನು ಹತ್ತಿರದಿಂದ ಬಲ್ಲ ಅವರ ಅನುಭವಕ್ಕೆ ಹಿಡಿದ ಕನ್ನಡಿ ಇದು.

"ಅನ್ಯರ ಅನುಭವವನ್ನು ಕೇಳಿ ಕಲ್ಪನೆಯಿಂದ ನಿರೂಪಣೆಮಾಡಿ ಲೇಖಕರು ಯಶಸ್ವಿ-ಯಾಗಬಲ್ಲರು ಎಂಬುದಕ್ಕೆ ಸೊನ್ನೆಯಿಂದ ಸೊನ್ನೆಗೆ ಒಂದು ಒಳ್ಳೆಯ ಉದಾಹರಣೆಯಾಗಿದೆ".[೨] ಈ ಮಾತನ್ನು ಗಮನಿಸಿದಾಗ ಸೃಜನಶೀಲತೆ ಇರುವ ಮನಸ್ಸು ಯಾವುದರಿಂದಲೂ ಸ್ಫೂರ್ತಿ ಪಡೆದು ಮುನ್ನಡೆಯುತ್ತದೆ ಎಂಬುದಕ್ಕೆ ಕೃತಿಕಾರರು ಸಾಕ್ಷಿಯಾಗಿದ್ದಾರೆ.

ಲೇಖಕರು ಗಾದೆ ಮತ್ತು ಅದರ ಸುತ್ತಿನ ಕಥೆಯನ್ನು ಕೇಳಿ ಉತ್ತೇಜಿತರಾಗಿ ಇತರ ಕಥೆಗಳನ್ನು ಸಂಶೋಧಿಸಿ ಕಾದಂಬರಿಯಾಗಿಸಿದ್ದಾರೆ. ಇದಕ್ಕೆ ಒಂದು ಗ್ರಾಮ ಕೇಂದ್ರವಾಗಿದೆ. ಅದರಲ್ಲಿನ ಪಾತ್ರಗಳು, ಸನ್ನಿವೇಶಗಳು, ಆಚರಣೆಗಳು ಕೇವಲ ಒಂದು ಊರಿಗೆ ಸೀಮಿತವಾಗಿರದೆ, ಬಯಲುಸೀಮೆಯ ಒಕ್ಕಲುಮಕ್ಕಳ ಜೀವನವನ್ನು ನೈಜವಾಗಿ ಚಿತ್ರಿಸುತ್ತವೆ. ಈ ಕಾದಂಬರಿ ಒಂದು ನೀಳ್ಗತೆಯಾಗಬಹುದಿತ್ತು ಎನಿಸಿದರೂ ಅದರ ಭಾಷೆ, ಉಪಕಥೆಗಳಿಂದ ತುಂಬಿ ಅಂತಿಮವಾಗಿ ಕಾದಂಬರಿ ರೂಪ ಸಹ್ಯವೆನಿಸುತ್ತದೆ. ಜಾನಪದ ಅಧ್ಯಯನಕ್ಕೆ ಯೋಗ್ಯ ಪರಿಕರವಾಗಿ ಓದುಗರನ್ನು ಸೆಳೆಯುತ್ತದೆ.

೪.೨ **ಮೈಲಾರದ ಐತಿಹ್ಯ** – ಕಾದಂಬರಿಯಲ್ಲಿ ಮೈಲಾರ ಗ್ರಾಮ ಕಥೆಯ ಕೇಂದ್ರವಾಗಿದೆ. ಅದಕ್ಕೆ ಸೇರಿಕೊಂಡಂತೆ ಪ್ರಸ್ತಾಪಗೊಂಡಿರುವ ಅನೇಕ ಗ್ರಾಮಗಳ ಹೆಸರುಗಳು ನೈಜವಾದವೇ ಆಗಿವೆ. ಲೇಖಕರ 'ನನ್ನೂರು' ಕೃತಿಯಲ್ಲಿ ಬರುವ 'ನನ್ನೂರು' ಎಂಬುದು ಸಾಂಕೇತಿಕವಾದಂತೆ ಇಲ್ಲಿ 'ಮೈಲಾರ' ಸಾಂಕೇತಿಕವಾಗಿದೆ. ಮಂಡ್ಯ ಸುತ್ತಮುತ್ತ ಈ ಹೆಸರು ಇರುವ ಗ್ರಾಮ ಕಾಣಸಿಗುವುದಿಲ್ಲ.

ಕಾದಂಬರಿಯಲ್ಲಿ ನನ್ನೂರಿನ ಬಗೆಗಿನ ಐತಿಹ್ಯವನ್ನು ಹೇಳುತ್ತಾರೆ. ಮೈಲಾರ ಗ್ರಾಮದ ಕಾಲವನ್ನು ಗುರುತಿಸುವ ಕಾದಂಬರಿಕಾರರು, ಮೈಲಾರಕ್ಕೆ ಹೊಲೆಯರೇ ಮೂಲನಿವಾಸಿಗಳು ಎನ್ನುತ್ತಾರೆ. 'ಅವರೇ ತರಗು ಗುಡಿಸಿ ಮನೆಕಟ್ಟಿ 'ಕರುಗಲ್ಲು'[೩] ನೆಟ್ಟವರು. ಅವರೇ ಮೊದಲಿಗೆ

---

೧. ನಾಗಸಂಪಿಗೆ, ೧೯೭೯, ಸಂ. ಎಚ್.ಜೆ.ಲಕ್ಕಪ್ಪಗೌಡ, ಲೇಖಕರು, ಬಿ.ಫಾಲಾಕ್ಷಯ್ಯ; ನಾಗಸಂಪಿಗೆ – ಎಚ್.ಎಲ್.ನಾಗೇಗೌಡರ ಸನ್ಮಾನ ಸಮಾರಂಭದ ನೆನಪಿನ ಸಂಚಿಕೆ.

೨. ನಾಗಸಂಪದ, ಸಂ. ಡಾ. ಚಕ್ಕೆರೆ ಶಿವಶಂಕರ್, ಕರ್ನಾಟಕ ಜಾನಪದ ಪರಿಷತ್ತು, ೨೦೦೧, ರಂ.ಶ್ರೀ.ಮುಗಳಿಯವರ ಪತ್ರದಿಂದ)

೩. ಕರುಗಲ್ಲು – ಊರಿನ ಪ್ರವೇಶದ್ವಾರದಲ್ಲಿಯೇ ಇದು ಕಂಡು ಬರುವಂತಹದ್ದು. ಗ್ರಾಮೀಣ ಭಾಗದಲ್ಲಿ 'ಮಕೆಕಲ್ಲು', 'ನರಿಕಲ್ಲು', 'ಕರಿಕಲ್ಲು' ಹೀಗೆ ಅನೇಕ ಬಗೆಯ ಕಲ್ಲುಗಳು ಅವರ ಸಂಸ್ಕೃತಿಯಲ್ಲಿ ವಿಶಿಷ್ಟ ಸ್ಥಾನ ಪಡೆದಿವೆ. 'ಮಕೆಕಲ್ಲು' ವೈಯಕ್ತಿಕ ಹಾಗೂ ಅವರವರ ಮನೆ ಮುಂದೆ ಇರುವಂತದ್ದು, 'ಕರುಗಲ್ಲು' ಸಮಷ್ಟಿಗೆ ಸೇರಿದುದು. ಮನೆಕಟ್ಟಿದಾಗ ಆಯ ನೋಡಿ ಶುಭ–

ಹುತ್ತದ ಮೇಲಿರುವ ಕಾಳಮ್ಮನ ಗುಡಿ ಕಟ್ಟಿದವರು (ಸೊನ್ನೆಯಿಂದ ಸೊನ್ನೆಗೆ, ಪು. ೯೫). ನಾಯಕ 'ಚನ್ನ'ನ ಕಾಲಕ್ಕೆ ೧೫೦ ಮನೆಗಳಿರುವ ಊರು; ಊರಿನ ದೇವರು 'ಶ್ರೀಮೈಲಾರಲಿಂಗ' – ಈಶ್ವರನ ಒಕ್ಕಲುಗಳೇ ಇರುವ ಮೈಲಾರದಲ್ಲಿ (ಪು. ೧೩೨) ಶಿವಾಚಾರದವರೂ ಮೈಲಾರದ ಗೌಡರುಗಳೂ ಹಿಂದೆ ಲಿಂಗಕಟ್ಟಿಕೊಂಡಿದ್ದವರೇ ಅಂತೆ. ಒಂದು ಸಲ ಕೆಲವರು ಮೀನಿಗೆ ಆಸೆಮಾಡಿ ಅವನ್ನು ಹಿಡಿದು ಬೇಯಿಸಿಕೊಂಡು ತಿಂದುಬಿಟ್ಟರಂತೆ. ಆಗಲಿಂದ ಮೀನು ತಿಂದವರು ಒಕ್ಕಲಿಗರಾದರಂತೆ (ಪು. ಸಂಖ್ಯೆ ೨೩). ಆಹಾರ ಪದ್ಧತಿ – ಸಾಮಾಜಿಕ ಶ್ರೇಣಿಯ ಮೇಲೆ ಪರಿಣಾಮ ಬೀರುತ್ತದೆ. ಬಹುಪಾಲು ಜಾತಿಪದ್ಧತಿಗೆ ವೃತ್ತಿಯಂತೆ ಮತ್ತೊಂದು ರೀತಿಯಲ್ಲಿ ಆಹಾರಕ್ರಮವೂ ಕಾರಣವಾಗಿದೆ. ಶಾಕಾಹಾರಿಗಳು ಮಾಂಸಹಾರ ಬಯಸುವ, ಮಾಂಸಹಾರಿಗಳು ತಮ್ಮ ಪದ್ಧತಿಯನ್ನು ತ್ಯಜಿಸುವ ಪ್ರಕ್ರಿಯೆಯನ್ನು ಇಂದಿನ ಸಮಾಜದಲ್ಲೂ ಕಾಣಬಹುದು. ಇದರ ಒಂದು ಸ್ಥಿತ್ಯಂತರವನ್ನು ೧೫೦ ವರ್ಷಗಳ ಹಿಂದಿನ ಸಮಾಜದಲ್ಲೂ ಕಾಣಬಹುದಾಗಿತ್ತು ಎಂಬುದಕ್ಕೆ ಈ ಘಟನೆ ಪುಷ್ಠಿ ನೀಡುತ್ತದೆ.

ನಿರ್ದಿಷ್ಟ ವ್ಯಕ್ತಿ, ಸ್ಥಳ, ಘಟನೆ, ಚರಿತ್ರೆ ಸಮಾಜ ಸಂಸ್ಕೃತಿಯ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕಥೆಯೇ ಐತಿಹ್ಯ. ಐತಿಹ್ಯದಲ್ಲಿರುವ ಕಥೆಯನ್ನು ಜನ ನಿಜವಾಗಿ ನಡೆದುದೆಂದು ನಂಬುವ ಸಂಭವವುಂಟು – ಜನತೆಯ ಮನಸ್ಸಿನಲ್ಲಿ ಕೆಲವು ವ್ಯಕ್ತಿಗಳ ಬಗ್ಗೆ, ಘಟನೆಗಳ ಬಗ್ಗೆ ಗೌರವ ಮೂಡಿಸುವ ಉದ್ದೇಶದಿಂದಲೂ ಇಂತ ಐತಿಹ್ಯಗಳು ಹುಟ್ಟಿಕೊಂಡಿರಬಹುದು. ಪವಾಡ, ಕಲ್ಪನೆ, ಉತ್ಪ್ರೇಕ್ಷೆ ಮೊದಲಾದವು ಐತಿಹ್ಯಗಳಲ್ಲಿ ಸಾಂಸ್ಕೃತಿಕ ಚರಿತ್ರೆ ಮತ್ತು ಇತಿಹಾಸದ ಅನೇಕ ಅಂಶಗಳು ಹುದುಗಿಕೊಂಡಿರುತ್ತವೆ. ಇಂದು ಪ್ರಚಲಿತವಿರುವ ನಂಬಿಕೆ, ಆಚಾರ, ವಿಚಾರ ಅಥವಾ ಸ್ಥಳ ಮಹಿಮೆಯನ್ನು ತಿಳಿದುಕೊಳ್ಳುವುದಕ್ಕೆ ಐತಿಹ್ಯಗಳು ಬಹುಮುಖ್ಯ ಆಧಾರವಾಗುತ್ತವೆ. ಇಂಥ ಹಲವು ಐತಿಹ್ಯಗಳ ಪ್ರಸ್ತಾಪ ಕಾದಂಬರಿಯಲ್ಲಿವೆ. ಅವನ್ನು ಕುರಿತು ಪ್ರತ್ಯೇಕ ಚರ್ಚೆಯನ್ನು ಪ್ರಸ್ತುತ ಪ್ರಬಂಧದಲ್ಲಿ ನಡೆಸಲಾಗಿದೆ.

**ಭೌಗೋಳಿಕ ಮಾಹಿತಿ:** ಈಗ ನೀರಾವರಿ ಪ್ರದೇಶವಾಗಿರುವ ಮಂಡ್ಯ ಜಿಲ್ಲೆ ಹಿಂದೆ ತೀರಾ ಬೆಂಗಾಡಾಗಿತ್ತು. ಕಾದಂಬರಿಯ ಕಥೆ ಈ ಜಿಲ್ಲೆಯ ಸುತ್ತಮುತ್ತಲ ಗ್ರಾಮಗಳ ವಿವರಗಳನ್ನು ಒಳಗೊಂಡಿದೆ. 'ಈ ಕಾದಂಬರಿಯ ಕಥೆಯನ್ನು ಮಂಡ್ಯ ಸುತ್ತಮುತ್ತಣ ಪ್ರದೇಶದಲ್ಲಿ ನೆಟ್ಟು ಬೆಳೆಸಲಾಗಿದೆ.[೧] ಮಂಡ್ಯ, ಮೈಸೂರು, ಉಕ್ಕಡ, ಶ್ರೀರಂಗಪಟ್ಟಣ ಮೊದಲಾದ ಮುಖ್ಯ

---

ಮುಹೂರ್ತದಲ್ಲಿ ಗುದ್ದಲಿ ಪೂಜೆ ಮಾಡುವಂತೆ ಹಿಂದೆ ಊರು ಕಟ್ಟುವಾಗಲೂ ವಾಸ್ತುಲಕ್ಷಣವನ್ನು ನೋಡಿ ನಿರ್ಮಾಣ ಕಾರ್ಯ ಕೈಗೊಳ್ಳುತ್ತಿದ್ದರು. ಈ ರೀತಿ ಹೊಸದಾಗಿ ಊರು ನಿರ್ಮಿಸುವಾಗ ಪೂಜಿಸಿ ನೆಟ್ಟ ಮೊದಲ ಕಲ್ಲೆ 'ಕರುಗಲ್ಲು'.

ಮನೆಗೆ ಹಾಕುವ ಕಲ್ಲಿಗಿಂತ ಗಾತ್ರದಲ್ಲಿ ಇದು ದೊಡ್ಡದಾಗಿದ್ದು ಊರ ಬಾಗಿಲ ಪಕ್ಕದಲ್ಲಿಯೇ ಇದಕ್ಕೆ ಸ್ಥಾನ. 'ಕರು' ಶಬ್ದಕ್ಕೆ ತಳಪಾಯ, ತಳಹದಿ ಎಂಬ ಅರ್ಥಗಳಿವೆ. ಹಾಗಾಗಿ ಕರುಗಲ್ಲು ಎಂಬುದು 'ಅಡಿಗಲ್ಲು'ಎಂಬ ಅರ್ಥವನ್ನು ಸ್ಫುರಿಸುತ್ತದೆ.

೧. ಸೊನ್ನೆಯಿಂದ ಸೊನ್ನೆಗೆ– ಪೀಠಿಕೆ, ಪು. iv, ಎರಡನೇ ಮುದ್ರಣ.

ಪ್ರದೇಶಗಳ ಜೊತೆಗೆ ಕಲ್ಕೆರೆ, ಬಳ್ಳೇಕೆರೆ, ಬೊಮ್ಮನಹಳ್ಳಿ, ತೂಬಿನಕೆರೆ, ಚಿಕ್ಕಬೊಮ್ಮನಹಳ್ಳಿ ಮೊದಲಾದ ಗ್ರಾಮಗಳು ಕಾದಂಬರಿಯಲ್ಲಿ ಕಾಣಿಸಿಕೊಂಡಿವೆ – ಉಕ್ಕಡ – ಮಂಡ್ಯಜಿಲ್ಲೆ ಪಾಂಡವಪುರದ ರೈಲು ನಿಲ್ದಾಣದಿಂದ ಸುಮಾರು ಎರಡುವರೆ ಕಿ.ಮೀ. ದೂರದಲ್ಲಿ (ಕ್ಯಾತನಹಳ್ಳಿಯ ನಡುವೆ) ಮೈಸೂರು ನಗರದಿಂದ ಇಪ್ಪತ್ತನಾಲ್ಕು ಕಿ.ಮೀ. ಅಂತರದಲ್ಲಿರುವ ಒಂದು ಗ್ರಾಮ.

೪.೨. **ಐತಿಹಾಸಿಕ ವಿಚಾರ:** ಕಾದಂಬರಿಯಲ್ಲಿ ಮೈಸೂರು, ಮೈಸೂರಿನ ಐತಿಹಾಸಿಕತೆ, ಅಲ್ಲಿನ ರಾಜಕೀಯ ವಿಚಾರಗಳು ತಳುಕುಹಾಕಿಕೊಂಡಿವೆ. ಕಾದಂಬರಿಯ ನಾಯಕ 'ಚನ್ನ' ಅಥವಾ 'ಚನ್ನೇಗೌಡ' ತನ್ನ ವ್ಯಾಪಾರ, ವ್ಯವಹಾರಗಳಿಗಾಗಿ ಮೈಸೂರಿನ ಸಂಪರ್ಕವಿಟ್ಟುಕೊಂಡಿರುತ್ತಾನೆ. ಕಾದಂಬರಿಯ ಆರಂಭದಲ್ಲಿಯೇ ಶಿವಾಚಾರದವನಾದ ಈರಭದ್ರಯ್ಯ ಚಾಮರಾಜ ಒಡೆಯರಿಗೆ ಪಟ್ಟಕಟ್ಟುವುದನ್ನು ನೋಡಲು ಹೊರಟ ವಿಚಾರವನ್ನು ಪ್ರಸ್ತಾಪಿಸುತ್ತಾನೆ. ಅದರ ಹಿಂದಿನಿಂದ ಮೈಸೂರಿನ ಇತಿಹಾಸ ಬಿಚ್ಚಿಕೊಳ್ಳುತ್ತದೆ. ''ಮೊದ್ಲು ದೊಡ್ಡ ಲಬಾಬರ ಕಾಲ, ಆಮ್ಯಾಲೆ ಚಿಕ್ಕಲಬಾಬರ ಕಾಲ. ಚಿಕ್ಕಲಬಾಬರು ಸತ್ತಮ್ಯಾಲೆ ಇಂಗ್ಲಿಷ್ನೋರು ಪಟ್ಟ ಗೆದ್ದುಕೊಂಡ್ರು. ಅವರು ಮುಮ್ಮಡಿ ಕೃಷ್ಣರಾಜೊಡೆಯರಿಗೆ ಪಟ್ಟಕಟ್ಟಿದರು. ಪೂರ್ಣಯ್ಯನೋರ್ನ ದಿವಾನ್ರ ಮಾಡಿದರು. ಅಮ್ಯಾಲೆ ಅದ್ಯಾಕೋ ಏನೋ ಇಂಗ್ಲಿಷಿನೋರು ರಾಜ್ಯ ಕಿತ್ತುಕೊಂಡು ಅವರ ದತ್ತುಮಗನಿಗೆ ಈಗ ಪಟ್ಟ....."(ಪು. ೮)

ಹೀಗೆ ಮೈಸೂರಿನ ಇತಿಹಾಸ; ಅಲಮೇಲಮ್ಮ ಕೊಟ್ಟ ಶಾಪದ ವಿಚಾರವನ್ನು ಒಳಗೊಂಡು ಅಂದು ಗ್ರಾಮೀಣರಲ್ಲಿದ್ದ ರಾಜಪ್ರಭುತ್ವದ ಬಗೆಗಿನ ಅಭಿಪ್ರಾಯಗಳನ್ನು ತೆರೆದಿಡುತ್ತದೆ.

೧೮೮೧ರಲ್ಲಿ ಬೆಂಗಳೂರಿನಿಂದ ಚನ್ನಪಟ್ಟಣಕ್ಕೆ ರೈಲುಹಾಕುವ ಕೆಲಸ ಸಾಗುತ್ತಿತ್ತು.[೧] ಎಂಬ ಸಾರಿಗೆ ವಿದ್ಯಮಾನವೂ ತಿಳಿದುಬರುತ್ತದೆ. ಹೈದರಾಲಿ – ಫ್ರೆಂಚರ ಸ್ನೇಹದ ಕಾರಣವಾಗಿ ಮೈಸೂರಿಗೆ ಹಿಪ್ಪುನೇರಳೆ ಬೆಳೆ ಬಂದ ವಿಚಾರವಿದೆ. ಮೈಲಾರದಲ್ಲಿಯೂ ರೇಷ್ಮೆಗೂಡು ಬೆಳೆಯುತ್ತಿದುದು. ಅದನ್ನು ಕೊಂಡುಕೊಳ್ಳಲು ಚನ್ನಪಟ್ಟಣದಿಂದ ಸಾಬರುಗಳು ಬರುತ್ತಿದುದು ಮೊದಲಾದ ವ್ಯಾಪಾರಕ್ಕೆ ಸಂಬಂಧಿಸಿದ ಅನೇಕ ಸಂಗತಿಗಳು ಗಮನಸೆಳೆಯುತ್ತವೆ.[೨]

ಕಾದಂಬರಿಯ ನಾಯಕ ಚನ್ನೇಗೌಡರು ಊರಿನಲ್ಲಿ ಕಟ್ಟಿಸಬೇಕಾದ ದೇವಸ್ಥಾನದ ಮಾದರಿಯನ್ನು ನೋಡಲು ಮೈಸೂರಿಗೆ ಹೋಗುತ್ತಾರೆ. ಕಾಲ ೧೯೧೩. ''ಆಗಲೇ ಮೈಸೂರು ಮಹಾರಾಜರ ಅರಮನೆ ಕಟ್ಟಿ ಮುಗಿಸಿಯಾಗಿತ್ತು. ೧೮೯೭ರಲ್ಲಿ ಸುಟ್ಟುಹೋದ ಹಳೆ

---

೧. ಸೊನ್ನೆಯಿಂದ ಸೊನ್ನೆಗೆ– ಪೀಠಿಕೆ, ಪು. ೭೫

೨. ಅದೇ

ಅರಮನೆಯ ಬದಲು ಹೊಸ ಅರಮನೆಯನ್ನು ಅದೇ ವರ್ಷ ಆರಂಭಮಾಡಿ ಮುಗಿಸಿ, ಈಚೆಗೆ ಅದನ್ನು ಒಡೆಯಿಸಿ ಮತ್ತೊಂದು ಹೊಸ ಅರಮನೆಯನ್ನು ಆರಂಭಿಸಿ, ನಾಲ್ಕು ಲಕ್ಷ ರೂಪಾಯಿ ಖರ್ಚುಮಾಡಿ ೧೯೧೨ರಲ್ಲಿ ಪೂರೈಸಿದ್ದರು. ೧೯೧೫ರ ಸುಮಾರಿನಲ್ಲಿ ಮೈಲಾರದ ಧೂಪದಮನೆ ಚನ್ನೇಗೌಡರು ಆ ಅರಮನೆಯನ್ನು ನೋಡಲು ಹೋದರು"[೧]

'ಚಾಮರಾಜ ಒಡೆಯರು ಕಾಲವಾಗಿ ನಾಲ್ವಡಿ ಕೃಷ್ಣರಾಜ ಒಡೆಯರು ಪಟ್ಟಕ್ಕೆ ಬಂದು ಒಳ್ಳೆ ಮಾರಾಜ್ರೂ! ಎಂದು ಹಳ್ಳಿಯವರ ಬಾಯಲ್ಲೂ ಹೇಳಿಸಿಕೊಳ್ಳುತ್ತಿದ್ದರು'. ಕಥಾನಾಯಕ ಧೂಪದ ಚನ್ನೇಗೌಡ ಐತಿಹಾಸಿಕ ವ್ಯಕ್ತಿಯಾಗಿದ್ದಿರಬಹುದಾದ ಕಾರಣ – 'ಕಥೆಯನ್ನು ಕಳೆದ ಶತಮಾನದಿಂದಲೇ ಆರಂಭಿಸಬೇಕಾಯಿತು. ಅಲ್ಲದೆ ಹಿಂದಿನ ಗ್ರಾಮೀಣ ಬಾಳಿನ ಚಿತ್ರವನ್ನು ಚಿತ್ರಿಸುವುದಕ್ಕೂ ಕಾಲ ಎಷ್ಟು ಹಿಂದಕ್ಕೆ ಹೋದರೆ ಅಷ್ಟು ಒಳ್ಳೆಯದು ಹಾಗೂ ಸೂಕ್ತ ಎನಿಸಿತು' ಎಂದು ಕಾದಂಬರಿಯನ್ನು ಕುರಿತು ಪೀಠಿಕೆಯಲ್ಲಿ ಹೇಳಿಕೊಂಡಿದ್ದಾರೆ. ಕಾದಂಬರಿಕಾರರು ಪ್ರಜ್ಞಾಪೂರ್ವಕವಾಗಿ ಮೈಸೂರಿನ ಇತಿಹಾಸವನ್ನು ಬಳಸಿಕೊಂಡಿದ್ದಾರೆ. ಅವರ ಸಾಂದರ್ಭಿಕ ಬಳಕೆ ಶ್ಲಾಘನೀಯವಾದುದು.

**೪.೪. ಜಾತಿ, ಒಕ್ಕಲು, ಕಸುಬು:** ಜಾನಪದೀಯ ಅಧ್ಯಯನದಲ್ಲಿ ಜಾತಿಪದ್ಧತಿ, ಜನರ ಕಸುಬುಗಳ ವಿವರಣೆ, ವಿಶ್ಲೇಷಣೆಗಳು ಬಹಳ ಪ್ರಮುಖವಾದವು. ಇವುಗಳಿಂದ ಆ ಪ್ರದೇಶದ ಒಂದು ಸಂಸ್ಕೃತಿಯ ಪರಿಚಯವಾಗುತ್ತದೆ.

ಮೈಲಾರದಲ್ಲಿ ಒಕ್ಕಲಿಗರು, ಶಿವಾಚಾರದವರು (ವೀರಶೈವರು), ಅಕ್ಕಸಾಲಿಗರು, ಕುರುಬರು, ಹೊಲೆಯರು, ಒಡ್ಡರು, ಬೆಸ್ತರು ಮೊದಲಾದ ಜಾತಿಯವರು ಇದ್ದರು. ಶಿವಾಚಾರದವರೂ ಮೈಲಾರದ ಗೌಡಗಳೂ ಹಿಂದೆ ಲಿಂಗಕಟ್ಟಿಕೊಂಡಿದ್ದು ಕೆಲವರು ಮೀನಿಗೆ ಆಸೆಮಾಡಿ ಅದನ್ನು ಹಿಡಿದು ಬೇಯಿಸಿ ತಿಂದದ್ದರಿಂದ ತಿಂದವರು ಒಕ್ಕಲಿಗರಾದರೆಂದು ಜಾತಿ ವಿಘಟನೆಯ ಇತಿಹಾಸವನ್ನು ಹೇಳುತ್ತಾರೆ. ಈ ರೀತಿಯ ಸಂಗತಿಗಳು ಸತ್ಯವೆಂದು ನಂಬಲು ವಡೇರಹಳ್ಳಿಯ ದೇವರಿಗೆ ಎರಡು ಊರಿನವರೂ ಸೇರಿ ಒಟ್ಟಿಗೆ 'ಕೊಂಡಬಂಡಿ' ಮಾಡುವ ಸಂಗತಿ ಪುಷ್ಟಿಕೊಡುತ್ತದೆ.[೨]

ಒಕ್ಕಲಿಗರಲ್ಲಿ ಈಶ್ವರನ ಒಕ್ಕಲು ಮತ್ತು ತಿರುಪತಿ ತಿಮ್ಮಪ್ಪನ ಒಕ್ಕಲುಗಳು ಇದ್ದು, ವಡೇರಹಳ್ಳಿಯಲ್ಲಿ ಕೇವಲ ಮೂರು ಮನೆ ಮಾತ್ರ ತಿಮ್ಮಪ್ಪನ ಒಕ್ಕಲುಗಳಿದ್ದರು. ಕಥಾನಾಯಕನ ತಾತ ಚನ್ನನ ಪೂರ್ವಿಕರು ಈಶ್ವರನ ಒಕ್ಕಲೇ ಆಗಿದ್ದರು. ಚನ್ನ ಮೈಲಾರಕ್ಕೆ ಬಂದಮೇಲೆ ಯಾವ ದೇವರಾದರೂ ಆಗುತ್ತಿತ್ತು. ತಿಮ್ಮಪ್ಪನ ಒಕ್ಕಲುಗಳು 'ಶನಿವಾರ' ಮಾಡುತ್ತಿದ್ದವು.

---

೧. ಸೊನ್ನೆಯಿಂದ ಸೊನ್ನೆಗೆ– ಪೀಠಿಕೆ, ಪು. ೧೪೪

೨. ಅದೇ

"ಚನ್ನಯ್ಯ ಕಥಾನಾಯಕ ಚನ್ನೇಗೌಡರ ತಾತ ಮೈಲಾರದ ಚಾಜಗಾರ ಕುಳ. ಹಾಗೆಂದರೆ ಊರಿನ ಅಣ್ಣ ತಮ್ಮತನಕೆ ಸೇರದೆ ಇದ್ದವನು ಎಂದರ್ಥ. ಅವನು ಊರಿನ ಗಂಡು ದೇವರಿಗೇ ಆಗಲಿ ಹೆಣ್ಣುದೇವರಿಗೇ ಆಗಲಿ ಒಕ್ಕಲಲ್ಲ. ಊರಿನಲ್ಲಿ 'ಎತ್ತುವಳಿ'[೧]ಯನ್ನು ಅವರು ಕೊಟ್ಟರೆ ಕೊಡಬಹುದು, ಇಲ್ಲದಿದ್ದರೆ ಬಿಡಬಹುದು. ಇವನು ಒಂದೇ ಕುಳವಾದರೂ ಎಲ್ಲರೊಳಗೆ ಒಬ್ಬನಾಗಿ 'ಉಗನಿ ಅಂಬು ಸುತ್ತಿಕೊಂಡಂತೆ' ಇದ್ದನು" ಎಂದು ಹೇಳುವಲ್ಲಿ ಇಂಥವರು ಎಲ್ಲರೊಳಗೆ ಹೇಗೆ ಬೆರೆಯುತ್ತಿದ್ದರು ಎಂಬುದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಲಾಗಿದೆ.

ದೊಡ್ಡಟ್ಟಿ ಕಲ್ಲೇಗೌಡರು, ಅವರ ಮಗ ಮಲ್ಲೇಗೌಡ, ಪಟೇಲ ಕುಳ್ಳೇಗೌಡರು ಗ್ರಾಮದ ಪ್ರಮುಖರು. ಗುರುಸಿದ್ದಯ್ಯ ಮತ್ತು ಅವರ ಮಗ ಗುರುಮಲ್ಲಯ್ಯನವರು ಊರಿನ ಜನರ ಭಕ್ತಿ, ಪ್ರೀತಿಗೆ ಪಾತ್ರರಾಗಿದ್ದವರು. ಶಿವಪೂಜೆಯನ್ನು ಮನೆಯಲ್ಲಿ ಸರಳವಾಗಿ ನೆರವೇರಿಸುತ್ತಿದ್ದ ಇವರು, ಪ್ರೇರಣೆ ಒದಗಿದಾಗ ವಡೇರಹಳ್ಳಿಗೆ ಹೋಗಿ ವೀರಭದ್ರದೇವರನ್ನು ಆಗಾಗ ಪೂಜೆಮಾಡಿ ಬರುತ್ತಿದ್ದರು.

ಊರಿನ ಹಬ್ಬ ಉತ್ಸವ, ಕಂದಾಯ ಬಾಕಿ ವಸೂಲು ಮೊದಲಾದ ಊರೊಟ್ಟಿನ ಕಾರ್ಯಗಳಿಗೆ ಸಾರುವುದರ ಮೂಲಕ ಚಾಲನೆ ಕೊಡುತ್ತಿದ್ದವರು ಹೊಲೆಯರು. ಆ ಪದ್ಧತಿ ಇಂದೂ ಇದೆ. ಹೊಲೆಯರು ಮೈಲಾರದ ಮೂಲನಿವಾಸಿಗಳಾದ್ದರಿಂದ ಅವರೇ ತರಗುಗುಡಿಸಿ ಮನೆಕಟ್ಟಿ 'ಕರಗಲ್ಲು' ನೆಟ್ಟು, ಹುತ್ತದ ಮೇಲಿರುವ ಕಾಳಮ್ಮನ ಗುಡಿಕಟ್ಟಿದವರಾದ್ದರಿಂದ ಆ ಗುಡಿಯ ಪೂಜಾರಿಕೆ ಮತ್ತು ಕುಳವಾಡಿಕೆ ಎರಡೂ ಹುಚ್ಚೀರನಿಗೆ ವಂಶಪಾರಂಪರ್ಯವಗಿ ಬಂದಿತ್ತು.[೨]

ತೋಟಿತನ ಅಥವಾ ಕುಲವಾಡಿಕೆ ಕೆಲಸ ಆ ಕಾಲಕ್ಕೆ ನೀಚಕೆಲಸ ಎಂದು ಊರಿನ ಒಕ್ಕಲಿಗರಾಗಲಿ, ಹೊಲೆಯರಾಗಲಿ ಭಾವಿಸಿರಲಿಲ್ಲ. ಅದಕ್ಕೆ ಬದಲು, ಅದೊಂದು ತಳಮನೆಯ 'ಅರಮನೆಚಾಕರಿ' ಎಂದು ಎಲ್ಲರೂ ಭಾವಿಸಿದ್ದರು.[೩]

ವಡ್ಡರು ಒಂದೆಡೆ ನಿಲ್ಲುತ್ತಿರಲಿಲ್ಲ ಎಂಬ ಉಲ್ಲೇಖವಿದೆ. ಅಂಥ ವಡ್ಡರನಾಗನನ್ನು (ದೇವಸ್ಥಾನ ಕಟ್ಟಿಸಲು) ಹೇಗೋ ಹಿಡಿದು ಕಲ್ಲು ಒಡೆಸುವ ಕೆಲಸಕ್ಕೆ ನೇಮಿಸುತ್ತಾರೆ. ಊರಿನಲ್ಲಿ ಪ್ಲೇಗು ಕಾಣಿಸಿಕೊಂಡರೆ ಬೆಸ್ತರನ್ನು ಕರೆಸಿ ಮಾರಮ್ಮನನ್ನು ಬೆಳಗಿಸುವ ಮೂಲಕ ಶಾಂತಿ ಮಾಡುತ್ತಿದ್ದರು ಎಂಬ ಮಾಹಿತಿಯನ್ನು ಗಮನಿಸಿದಾಗ ಸಾಂಕ್ರಾಮಿಕ ರೋಗಗಳಿಗೆ ಜನಪದರ ಸ್ಪಂದನೆ ಯಾವ ರೀತಿಯದು ಎಂಬ ಅರಿವು ಮೂಡುತ್ತದೆ. ಅಲ್ಲದೇ ಇಂಥ ಕೆಲವು

---

೧. ಎತ್ತುವಳಿ > ಎತ್ತೋಳಿ = ಊರೊಟ್ಟಿನ ಧಾರ್ಮಿಕ ಕಾರ್ಯಗಳಿಗೆ ಧನಧಾನ್ಯ ಸಂಗ್ರಹಿಸುವುದು.

೨. ಸೊನ್ನೆಯಿಂದ ಸೊನ್ನೆಗೆ– ಪು. ೯೫

೩. ಅದೇ

ಕಾಯಿಲೆಗಳಿಗೆ ಇಂದಿನ ಸಮಾಜದಲ್ಲೂ 'ಶಾಂತಿ' ಮಾಡಿಸುವುದು ಮೊದಲಾದ ಆಚಾರಗಳಿರುವುದನ್ನು ಗಮನಿಸಬಹುದಾಗಿದೆ.

ಮೈಲಾರದಲ್ಲಿ ಎರಡು-ಮೂರು ಕುರುಬರ ಮನೆಗಳಿದ್ದವು. ಅವರು ಊರಿನ ಕುರಿಗಳ ತುಪ್ಪಟ ಕತ್ತರಿಸಿಕೊಂಡು ಅದರಲ್ಲಿ ಎರಡು ಕಂಬಳಿಗಳನ್ನು ನೇಯ್ದು ಒಂದು ಕಂಬಳಿ ಅವರಿಟ್ಟುಕೊಂಡು ಇನ್ನೊಂದನ್ನು ಕುರಿಯವರಿಗೆ ಕೊಡುತ್ತಿದ್ದರು.

ವಾಜರು ಗ್ರಾಮದಲ್ಲಿದ್ದುಕೊಂಡು ತಮ್ಮ ಕುಲಕಸುಬನ್ನು ಮುಂದುವರಿಸಿಕೊಂಡು ಹೋಗುತ್ತಿದ್ದರು.

'ಅಕ್ಕಸಾಲಿಗ ಅಕ್ಕನಹತ್ತಿರವೂ ಕಾಸಿನ ಚಿನ್ನ ಬಿಡ' – 'ಅಕ್ಕಸಾಲೆ ಅಕ್ಕಕೊಟ್ಟ ಚಿನ್ನಾದರೂ ಎಕ್ಕುಟ್ಟಸದೆ ಬಿಡ' ಇತ್ಯಾದಿ ಮಾತುಗಳು ಅಕ್ಕಸಾಲಿಗರ ಬಗ್ಗೆ ಈಗಲೂ ಜನಜನಿತವಾಗಿವೆ. ಚಿನ್ನ ಬೆಳ್ಳಿ ಒಡವೆ ಮಾರುವ – ಮಾಡುವ, ಚಿನಿವಾರದವರು ಅಥವಾ ವಾಜರು ತೀರಸ್ವಲ್ಪ ಭಾಗವನ್ನಾದರೂ ಮಿಗಿಸಿಕೊಳ್ಳದೆ ಇರಲಾರರು ಎನ್ನುವುದಕ್ಕೆ ಕಾದಂಬರಿಯಲ್ಲಿ ಮೈಸೂರಿನ ಮಾರ್ತಾಂಡಾಚಾರಿ ಒಳ್ಳೆಯ ನಿದರ್ಶನವಾಗುತ್ತಾನೆ.

ಒಂದು ಊರು. 'ಊರು' ಎನಿಸಿಕೊಳ್ಳಬೇಕಾದರೆ ''ಒಂದು ಕೆರೆ, ನಾಲ್ಕಾರು ಕೊಳ, ಕಟ್ಟೆ, ನಾಲ್ಕು ಜನ ಹಿರೀಕರು. ಒಂದು ಬದುಕಿನ ಮನೆ, ಒಬ್ಬ ಬ್ರಾಹ್ಮಣ. ಒಂದು ಹಣಮಂತ ದೇವರು, ಒಂದು ಅಶ್ವತ್ಥಕಟ್ಟೆ, ಒಂದು ಹೆಬ್ಬಾಗಿಲು, ಒಂದು ಮಾರಮ್ಮನ ಗುಡಿ, ಒಂದು ಬೋರಪ್ಪನಗುಡಿ, ಒಂದು ತೋಟಮಾಳ ತೋಪು – ಇಷ್ಟೆಲ್ಲಾ ಇರಬೇಕು. ಇವೆಲ್ಲಾ ಇದ್ರೇ ಲಕ್ಷಣ''.[೧] ಇದು ಒಂದು ಆದರ್ಶಗ್ರಾಮದ ರೂಪವೂ ಹೌದು; ಸ್ವತಂತ್ರ ಗ್ರಾಮವೂ ಹೌದು. ಒಂದು ಹಳ್ಳಿಗೆ ಪರಿಪೂರ್ಣತೆ ಬರುವುದು. ಈ ಎಲ್ಲಾ ಅವಯವಗಳಿಂದ. ಈ ಕಲ್ಪನೆ ಅವರ ಮನಸ್ಸಿನ ಆದರ್ಶ ಸ್ಥಿತಿಯನ್ನು ಅನಾವರಣಗೊಳಿಸುತ್ತದೆ. ಎಲ್ಲ ಜಾತಿಗಳವರೂ ಪರಸ್ಪರ ಸಹಾಯ ಸಹಕಾರದಿಂದ ಇದ್ದು ತಮ್ಮ ಕಸುಬುಗಳಲ್ಲಿ ಮುಂದುವರಿಯುತ್ತಿದ್ದದು ವಾಡಿಕೆಯಾಗಿತ್ತು. ಸಾಮರಸ್ಯದ ಬದುಕು ಅವರದಾಗಿರುತ್ತಿತ್ತು.

ಇಂದು ಗ್ರಾಮಜೀವನ ಬದಲಾಗಿದೆ. ಅದು ಅನಿವಾರ್ಯ ಅಷ್ಟೇ ಅಲ್ಲ ಅವಶ್ಯಕ. ಇಂತದ್ದೇ ಕಸುಬು ನಡೆಸಬೇಕೆಂದು ನಿಯಮವಿಲ್ಲ. ವಿದ್ಯಾಭ್ಯಾಸ ಪದ್ಧತಿಯಿಂದ ಯಾರು ಯಾವ ಹುದ್ದೆಯನ್ನಾದರೂ ಪಡೆಯುವ ಶಕ್ತಿಯನ್ನು ಹೊಂದಬಹುದಾಗಿದೆ. ಹುಟ್ಟಿನಿಂದ ಬಂದ ಕಸುಬುಗಳನ್ನೇ ನಿರ್ವಹಿಸಬೇಕೆಂಬ ಪದ್ಧತಿಗಳಿಂದ ಮುಕ್ತರಾಗಿದ್ದಾರೆ.

**೪.೫ ಧಾರ್ಮಿಕ ನಂಬಿಕೆ:** ಜನಪದ ಮನೋಲೋಕ ಸಹಜವೂ ಸರಳವೂ ಆದುದು. ಅವರ ಎಲ್ಲ ಕ್ರಿಯೆಗಳಲ್ಲೂ ಒಂದು ನಂಬಿಕೆಯಿರುತ್ತದೆ. ನಂಬಿಕೆಗಳಿಲ್ಲದೆ ಆಚರಣೆಗಳಿರುವುದಿಲ್ಲ,

೧. ಸೊನ್ನೆಯಿಂದ ಸೊನ್ನೆಗೆ – ಪು. ೯೩

ನಂಬಿಕೆಗಳು ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿರುತ್ತವೆ. ನಂಬಿಕೆಗಳು ವಸ್ತುಸ್ಥಿತಿಯ ಬಗೆಗಿನ ಮಾನಸಿಕ ಒಪ್ಪಿಗೆಯಾಗಿವೆ. ಇವು ಮೂಲಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ಪರಿಚಯಿಸುವ ಪ್ರಮುಖ ಸಾಧನಗಳಾಗಿವೆ. ಧಾರ್ಮಿಕ ನಂಬಿಕೆಗಳು ಜನಪದರ ಬಾಳನ್ನು ನಿರ್ದೇಶಿಸುತ್ತವೆ ಎಂದರೆ ಅತಿಶಯೋಕ್ತಿ ಯಾಗಲಾರದು. ಬಹಳಷ್ಟು ನಂಬಿಕೆಗಳು ಮೌಢ್ಯತೆಯಿಂದ ಕೂಡಿರಬಹುದಾದರೂ ಕೆಲ ನಂಬಿಕೆಗಳ ಹಿಂದೆಯಾದರೂ ಒಂದು ತರ್ಕ, ವೈಜ್ಞಾನಿಕ ಸತ್ಯ ಇಲ್ಲದಿಲ್ಲ.

ಜನಪದರಲ್ಲಿ ಮಳೆಗಾಗಿ ಹರಕೆ ಹೊರುವ ಪದ್ಧತಿಯಿದೆ. ಗ್ರಾಮೀಣ ಜೀವನದಲ್ಲಿ ಮಳೆ ಹಾಸು-ಹೊಕ್ಕಾಗಿದೆ. ನೀರು ಎಲ್ಲರಿಗೂ ಅವಶ್ಯಕವಾಗಿ ಬೇಕಾದ ಆಸ್ತಿ. 'ಜೀವನ' ಎನ್ನುವುದು ನೀರಿಗೆ ಇನ್ನೊಂದು ಹೆಸರು. ನೀರಿನ ಮಹತ್ವವನ್ನು ಧ್ವನಿಸುವ ಪರಿಪೂರ್ಣ ಹೆಸರು. ಈ ಮಹತ್ವ ಕಾರಣವಾಗಿ ಭೂತಪಂಚಕಗಳಲ್ಲಿ ಒಂದೆಂದು ಪರಿಗಣಿತವಾಗಿರುವ ಅದು ಮಾನವನ ಸಂಸ್ಕೃತಿಯನ್ನು ಪೋಷಿಸುವಲ್ಲಿ ಬಹುದೊಡ್ಡ ಪಾತ್ರವಹಿಸುತ್ತಾ ಬಂದಿದೆ.

ಮಳೆ ಇದ್ದರೆ ಬದುಕು. ಮಳೆ ಬಂದ್ರೆ ಸೊಬಗು. ಇಲ್ಲದಿದ್ರೆ ಕೊರಗು ಎಂಬ ಮಾತಿದೆ. ಮನುಷ್ಯ ವ್ಯವಸಾಯಗಾರನಾದ ಮೇಲಂತೂ ಮಳೆ ಇನ್ನೂ ಆಪ್ತವಾಯಿತು; ಅತ್ಯಾವಶ್ಯಕವೆನಿಸಿತು. 'ಆಕಾಶದ ಮಳೆ ಭೂಮಿಯ ಬೆಳೆ' ಎನ್ನುವ ಮಾತು ಅದರ ಮಹತ್ವವನ್ನು ಸ್ಪಷ್ಟಪಡಿಸುತ್ತದೆ. ಮಳೆಗೆ ಸಂಬಂಧಿಸಿದಂತೆ ಬಯಲು ಸೀಮೆಯಲ್ಲಿ ವಿಶೇಷವಾಗಿ ಆಚರಣೆಯಲ್ಲಿರುವ ಸಂಪ್ರದಾಯ, ನಂಬಿಕೆಗಳಿಗೆ ಈ ಕಾದಂಬರಿ ಕನ್ನಡಿ ಹಿಡಿಯುತ್ತದೆ. ಇಲ್ಲಿ ದೊಡ್ಡಟ್ಟಿ ಕಲ್ಲೇಗೌಡರು ವಿರಾಟಪರ್ವ ಓದಿಸಿ ಕುಂಭಾಭಿಷೇಕ ಮಾಡಿಸಿದರು. ಬಳಿಕ ಒಂದೇ ವಾರದಲ್ಲಿ ಮಳೆಯಾಯಿತು.[೧] 'ವಿರಾಟಪರ್ವ' ಓದಿದ ನಂತರ ಅಂದರೆ ೭ನೇ ದಿನ ಕುಂಭಾಭಿಷೇಕ ಮಾಡಿಸುವುದು ಇಂದೂ ಕೆಲವು ಗ್ರಾಮಗಳಲ್ಲಿ ರೂಢಿಯಲ್ಲಿದೆ.

ಹಿಂದೆ ಮಳೆರಾಯನ ಆಗಮನಕ್ಕಾಗಿ ಹಾರೈಸಿ ನಳಚರಿತ್ರೆಯನ್ನೊ, ವಿರಾಟಪರ್ವವನ್ನೊ ಓದಿಸುವ ಪದ್ಧತಿಯ ಹಿಂದೆ ಇದ್ದ ಉದೇಶವನ್ನು ಹೀಗೆ ಊಹಿಸಬಹುದು. ಮಳೆ ಬಾರದಿದ್ದಾಗ ರೈತಾಪಿ ಜನ ಮುಗಿಲು ನೋಡಿ, ಮುಂದಿನ ಬದುಕಿನ ಚಿಂತೆಯಿಂದ ಪರಿತಪಿಸುವಂತಾಗುತ್ತಿತ್ತು. 'ಮಳೆರಾಯನ ಮುನಿಸು' ಅದೊಂದು ದೊಡ್ಡ ಸುದ್ದಿಯೇ ಸರಿ! ಮುಂದೇನು ಎಂಬ ಪ್ರಶ್ನೆಯೇ ಸರಿ! ಹೀಗಿರುವಾಗ ಅವರು ವಿಕ್ಷಿಪ್ತ ಮನಸ್ಸಿನಿಂದ ನೆಮ್ಮದಿಯ ನೆಲೆಗೆ ಬರಲು ತೊಳಲುವಾಗ ಅದಕ್ಕೆ ಕಂಡ ಮಾರ್ಗವೇ 'ಕಾವ್ಯಶ್ರವಣ'. ಮಳೆ ಇಲ್ಲದೆ ಕೃಷಿ ಕಾರ್ಯಗಳು ಸ್ಥಗಿತಗೊಂಡದ್ದರಿಂದ ಬಿಡುವು ದೊರೆಯುತ್ತಿತ್ತು. ಇಂತಹ ಸಂದರ್ಭದಲ್ಲಿ ಧರ್ಮಶ್ರವಣ, ಕಾವ್ಯಶ್ರವಣ ಮನಸ್ಸಿಗೆ ಹಿತ ನೀಡುತ್ತಿದ್ದವು. ತಾತ್ಕಾಲಿಕವಾಗಿಯಾದರೂ ಅವರು

---

೧. ಸೊನ್ನೆಯಿಂದ ಸೊನ್ನೆಗೆ – ಪು. ೯೩

ಗೊಂದಲದಿಂದ ಮುಕ್ತವಾಗುತ್ತಿದ್ದರು. ಇದು ಈ ನಂಬಿಕೆಯ ಹಿಂದೆ ಇರುವ ಮನೋವೈಜ್ಞಾನಿಕ ಸತ್ಯವಿರಬಹುದು.

'ನಳಚರಿತ್ರೆ'ಯ ಮಹಾರಾಜ ನಳನು ಪಟ್ಟಪಾಡು, ಮಹಾಭಾರತದಲ್ಲಿ ಪಾಂಡವರು ಅನುಭವಿಸದ ಕಷ್ಟ, ಅದರಲ್ಲೂ ಅವರ ದುರ್ದಿನದ ಪರಮಾವಧಿ ಎಂಬಂತೆ ಇರುವ ವಿರಾಟನಗರದಲ್ಲಿನ ವೇಷಮರೆಸಿಕೊಂಡ ಸ್ಥಿತಿ – ಇವು ಮನಕಲುವಂತವು. ಇವರ ಕಥೆಗಳನ್ನು ಕೇಳಿದಾಗ ರಾಜರಾಗಿದ್ದ ನಳ, ಪಾಂಡವರೂ ಅನುಭವಿಸಿದ ಕಷ್ಟಕ್ಕಿಂತ ತಮ್ಮದೇನೂ ಹೆಚ್ಚಲ್ಲ ಎಂಬ ಭಾವನೆ ಉಂಟಾಗುತ್ತಿತ್ತು. ನಳ, ಧರ್ಮರಾಯ ಮೊದಲಾದ ಸಾತ್ವಿಕ ಪುರುಷರ ಸಮಾಧಾನ ಚಿತ್ತದ ಆದರ್ಶ ಗುಣಗಳನ್ನು ನೆನೆದಾಗ ಅವರ ಬದುಕಿಗೊಂದು ನೆಲೆ ಸಿಕ್ಕಂತಾಗಿ ಮುಂದಿನ ಕಷ್ಟಗಳನ್ನು ಎದುರಿಸಲು ಸ್ಥೈರ್ಯವೂ ಅದಕ್ಕೆ ಬೇಕಾದ ಉತ್ಸಾಹವೂ ಪ್ರಾಪ್ತಿಯಾಗುತ್ತಿತ್ತು.

ಒಟ್ಟಾರೆ ಕಾವ್ಯ ವಾಚನ ಮಾಡಿಸಿ, ಕುಂಭಾಭಿಷೇಕ ಮಾಡಿಸಿದರೆ ಮಳೆ ಬರುತ್ತದೆ ಎಂಬ ನಿರೀಕ್ಷೆಗಿಂತ ಆ ವಿಷಮಸ್ಥಿತಿಯನ್ನು ಹೇಗೆ ಸಮಾಧಾನದಿಂದ ನಿರ್ವಹಿಸುತ್ತಿದ್ದರು ಎಂಬುದು ಇಲ್ಲಿ ಮುಖ್ಯವಾಗಿದೆ.

ಇದು ನಂಬಿಕೆಯ ವಿಚಾರವಾಯಿತು. ಮಳೆಗಾಗಿ 'ಮೋಡಬಿತ್ತನೆ' ಮಾಡುವ ಪ್ರಯೋಗ ಇಂದಿನ ವಿಜ್ಞಾನದ ಶೋಧನೆಯಾಗಿದೆ. ಇದನ್ನು ಗಮನಿಸಿದರೆ ನಂಬಿಕೆ ಮತ್ತು ವಿಜ್ಞಾನ ಅಥವಾ ತಂತ್ರಜ್ಞಾನದ ನಡುವಿನ ಅಂತರ ಬೆರಗುಗೊಳಿಸುವಂತಾಗಿದೆ ಎನಿಸುತ್ತದೆ.

**ಮಕ್ಕಳಿಲ್ಲದ್ದಕ್ಕೆ ಹರಕೆ ಕಟ್ಟುವುದು:** ಅಂದೂ – ಇಂದೂ ಈ ರೀತಿಯ ನಡಾವಳಿಯನ್ನು ಕಾಣಬಹುದು. ಜನಪದರಲ್ಲೇ ಏಕೆ ನಗರಪ್ರದೇಶದಲ್ಲೂ ಆಸ್ತಿಕರೂ ಸಂತಾನಪ್ರಾಪ್ತಿಗಾಗಿ ಹರಕೆ ಹೊರುವ ಸಾಮಾನ್ಯ ದೃಶ್ಯಗಳನ್ನು ಕಾಣುತ್ತೇವೆ. ಕಾದಂಬರಿಯಲ್ಲಿ ಚಾಜಗಾರ ಕುಳದವನಾದ ಚನ್ನ ಮಕ್ಕಳಿಲ್ಲದ್ದಕ್ಕೆ, ಪೂರ್ವಜರು ಈಶ್ವರನ ಒಕ್ಕಲಾದರೂ ವಡೇರಹಳ್ಳಿಯ ತಿಮ್ಮಪ್ಪ ಒಕ್ಕಲುಗಳ ಪೈಕಿ ತಿಮ್ಮೇಗೌಡನು ಬೆಳಗುತ್ತಿದ್ದ 'ಕಡಾಸ'ನ್ನು ಹೊತ್ತು ನಡೆಯುತ್ತಾನೆ.[೧] ತಿಮ್ಮೇಗೌಡ "ನಮ್ಮ ದ್ಯಾವರ ಹೊಕ್ಕು ಹೊಕ್ಕಿವ್ನಿ ಅಂತ ಹೇಳಿ ಈ ಕಡಾಸ ಹೊತ್ತುಬುಡು ನೋಡೀವಂತೆ, ಮಕ್ಕಳಾಯ್ತವೊ ಇಲ್ವೊ ಅಂತ" ಎಂದು ಪಂಥ ಕಟ್ಟುವವನಂತೆ ಹೇಳಿದಾಗ ಚನ್ನಯ್ಯ ಹಾಗೆಯೇ ಮಾಡುತ್ತಾನೆ. ಚನ್ನಯ್ಯ ದೇವರಿಗೆ ಶಂಖಿನ ಕೂಗುಹಾಕಿ, ಅಡ್ಡಬಿದ್ದು, ನಂಗೆ ಮಕ್ಕಳಾದ್ರೆ ನಿಂಗೆ ತುಪ್ಪ ಕಜ್ಜಾಯದ ನೈವೇದ್ಯ ಮಾಡಸ್ತೇನಿ 'ಮೊದ್ಲಮಗನಿಗೆ ಮೂಡ್ಲಪ್ಪ ಅಂತ ಹೆಸರಕಟ್ತೇನಿ' ಎಂದು ಭಕ್ತಿಯಿಂದ ಬೇಡುತ್ತಾನೆ.

---

೧. ಕಡಾಸು ಎಂದರೆ – ಕಾದಂಬರಿಕಾರರೇ ಸೂಚಿಸಿರುವಂತೆ ಮುಂದೆ ಶಂಕು ಜಾಗಟೆ, ಅದಕ್ಕೆ ಪ್ರತಿಯಾಗಿ ಹಿಂದೆ ಭುವನಾಸಿ – ಇವುಗಳನ್ನು ಸೇರಿಸಿ ಮಾಡಿದ ಹೆಗಲ ಹೊರೆ.

ಚನ್ನಯ್ಯನ ಮಗ ಕುಂಡಪ್ಪನು ತನ್ನ ಕುರುಡಿಗೆ, ತನ್ನಣ್ಣ ಮೂಡ್ಲಪ್ಪನ ಸಾವಿಗೆ ಅವನ ಮಗ ಚನ್ನ 'ಅನಾಥ'ನಾಗಿರುವುದಕ್ಕೆ ತನ್ನ ತಂದೆ ಚನ್ನಯ್ಯ ದೈವಕ್ಕೆ ಮಾಡಿದ ದ್ರೋಹವೇ ಕಾರಣ ಎಂದು ತಿಳಿದಿದ್ದ. ಅರಿಯದ ಹನ್ನೊಂದು ವರ್ಷದ ಬಾಲ ಚನ್ನನನ್ನು ಕರೆದು ಸಿರಿಬಂದಾಗ "ಮೈಲಾರಲಿಂಗನ ಗುಡಿಕಟ್ಟಿಸಿ, ಹೊಸಲಿಂಗ ತಂದಿರಿಸಿ, ಅಭಿಷೇಕ ಮಾಡ್ಸು. ಇಷ್ಟುಮಾಡು, ಹಿಂದಿನೋರು ಮಾಡಿದ ಪಾಪ ಪರಿಹಾರ ಮಾಡು ನನ್ನ ಚಿನ್ನ...." ಎಂದು ಹೇಳಿ ಕಾಲವಾಗುತ್ತಾನೆ. ಇದು ಜನಪದರ ನಂಬಿಕೆಗೆ ಪುಷ್ಠಿಕೊಡುತ್ತದೆ. ಕೆಲವೊಮ್ಮೆ ಕಾಕತಾಳೀಯವೆಂಬಂತೆ ನಡೆಯುವ ಸಂಭವವೂ ಇದೆ.

ಜನಪದರ ದೃಷ್ಟಿಯಲ್ಲಿ ಹರಕೆಗಳು ಮಹತ್ವದ ಪಾತ್ರವನ್ನೇ ವಹಿಸುತ್ತವೆ. ಅವರು ಹರಕೆಗಳಿಂದ ಒಂದು ಮಾನಸಿಕ ಸಂತೋಷವನ್ನು ಅನುಭವಿಸುತ್ತಾರೆ.

ಗ್ರಾಮ್ಯರು ಕಾಯಿಲೆ ಬಿದ್ದಾಗ, ಹೆತ್ತಾಗ, ಸತ್ತಾಗ ಹೊನ್ನೆಸಳು ಕಟ್ಟುವುದು ರೂಢಿ[೧]. ಹರಕೆಗಳಲ್ಲಿ ಬೆಳ್ಳಿ ಸಾಮಾನು, ಚಿನ್ನದ ಸಾಮಾನು, ನಗದು ಕಂಟ್ರಿಹಣ ಇರುತ್ತಿದ್ದವು. ಅವುಗಳಲ್ಲಿ ಕಡಗ, ಕೈಮುರಿ, ತಾಳಿಗಳು ಪ್ರಧಾನವಾಗಿರುತ್ತಿದ್ದವು.[೨]

ಹೀಗೆ ಗ್ರಾಮನಿವಾಸಿಗಳಿಂದ ಕೂಡಿದ ಹರಕೆ – ಹಾಡ್ಯ ಮುಡುಪುಗಳು ದೇವಕಾರ್ಯಗಳಿಗೆ ವಿನಿಯೋಗವಾಗುತ್ತಿದ್ದವು. ಈ ರೀತಿಯ ವ್ಯವಸ್ಥೆಯನ್ನು ಇಂದಿಗೂ ಕಾಣಬಹುದು. ಪ್ರಕೃತಿಯ ಮಡಿಲಲ್ಲಿ ಬದುಕಬೇಕಾದ ಮಾನವ ಭಯಭಕ್ತಿಗಳಿಂದ ಮತ್ತು ಮನಸ್ಸಿನ ಅಸ್ಥಿರಭಾವನೆಗಳನ್ನು, ತಡೆಯಲು ದೈವಿಕ ನಂಬಿಕೆಗಳನ್ನು ಆಚರಣೆಯ ಕ್ರಮದಲ್ಲಿ ಉಳಿಸಿಕೊಂಡಿದ್ದಾನೆ. ಈ ರೀತಿಯ ಧಾರ್ಮಿಕ ನಂಬಿಕೆಗಳು ಅವನಿಗೆ ಒಂದು ರೀತಿಯ ನಿರುಮ್ಮಳ ಮನಸ್ಥಿತಿಯನ್ನು ತಂದುಕೊಟ್ಟು ಸಮಾಜವನ್ನೂ ಸ್ವಾಸ್ಥ್ಯವಾಗಿರಿಸಿವೆ.

**ಕೊಂಡಬಂಡಿ:** ಗ್ರಾಮದೇವತೆಯ ಹಬ್ಬದ ಅಂಗವಾಗಿ ಕೈಗೊಂಡ ಆಚರಣೆಯಿದು. 'ಕೊಂಡಹಾಯುವ' ಪದ್ಧತಿಯನ್ನು ಇಂದಿಗೂ ಹಲವಾರು ಗ್ರಾಮಗಳಲ್ಲಿ ಕಾಣಬಹುದು. ಕೊಂಡ ಹಾಯುವುದು ಎಂದರೆ ಕೆಂಡದ ಮೇಲೆ ನಡೆದುಹೋಗುವುದು. ಕೊಂಡಬಂಡಿ ಎಂದರೆ "ಗ್ರಾಮದೇವತೆಯ ಹಬ್ಬದ ಪ್ರಯುಕ್ತ ಕೊಂಡ ಹಾಕಿದ ಮೇಲೆ ಅದರ ಮೇಲೆ ಚಪ್ಪರ ಮೇಲ್ಕಟ್ಟನ್ನು ಕಟ್ಟಿ ಅದರ ಸುತ್ತಲೂ ಶೃಂಗಾರಮಾಡಿದ ಬಂಡಿಗೆ ಎತ್ತುಗಳನ್ನು ಕಟ್ಟಿಕೊಂಡು

---

೧. ಹೊನ್ನೆಸಳು – ರೋಗರುಜಿನ, ಕಷ್ಟ ಮುಂತಾದುವುಗಳ ನಿವಾರಣೆಗಾಗಿ ದೇವರನ್ನು ಪ್ರಾರ್ಥಿಸಿ-ಕೊಂಡು ಬೆಳ್ಳಿಯ ನಾಣ್ಯವನ್ನು ಅರಿಶಿನದ ಅರಿವೆಯಲ್ಲಿ ಮುಡುಪು ಕಟ್ಟುವುದು. ಇದನ್ನು ಸಾಮಾನ್ಯವಾಗಿ ಪರಿಶುದ್ಧವಾದ ಜಾಗದಲ್ಲಿ ಯಾರಿಗೂ ಎಟುಕದಂತೆ, ಉದಾಹರಣೆಗೆ ಹಾಲು ಮೊಸರು ಇಡುವ ನೆಲ್ಲಿಕಾಲಿಗೆ ಅಥವಾ ನೆಲುವಿಗೆ ಕಟ್ಟುತ್ತಿದ್ದರು. ಸೊನ್ನೆಯಿಂದ ಸೊನ್ನೆಗೆ, ಪು. ೨೪.

೨. ಸೊನ್ನೆಯಿಂದ ಸೊನ್ನೆಗೆ, ಪು. ೧೩

ವಿಧ್ಯುಕ್ತವಾಗಿ ಕಳಸ ಮುಂದಾಗಿ ಪ್ರದಕ್ಷಿಣೆ ಮಾಡುವುದು"[೧]. ಇಂಥ ಕೊಂಡ ಬಂಡಿಯ ಪ್ರಸಂಗದ ಚಿತ್ರಣ ಪ್ರಸ್ತುತ ಕಾದಂಬರಿಯಲ್ಲಿದೆ.

ಮೈಲಾರದ ಗೌಡರು ವಡೇರಹಳ್ಳಿಯ ಶಿವಾಚಾರದವರೂ ಹಿಂದೆ ಒಂದೇ ಜಾತಿಯವರಾಗಿದ್ದು ಕೆಲವರು ಮೀನು ತಿಂದು ಒಕ್ಕಲಿಗರಾದರು. ಆದರೆ ಈಗಲೂ ವಡೇರಹಳ್ಳಿಯ ದೇವರಿಗೆ ಎರಡು ಊರಿನವರೂ ಸೇರಿ ಒಟ್ಟಿಗೆ 'ಕೊಂಡಬಂಡಿ' ಮಾಡುವುದನ್ನು ನೋಡಿದರೆ ಅವರೆಲ್ಲ ಒಂದೇ ಜಾತಿಯವರೆಂಬುದು ನಿಜವಿರಬಹುದು" ಎಂದು ಲೇಖಕರು ಊಹಿಸುತ್ತಾರೆ. ಈ ರೀತಿಯ ಕೆಲವು ಐತಿಹಾಸಿಕ ಘಟನೆಗಳು ಆ ಕಾಲಕ್ಕೆ ಸಂಘರ್ಷಗಳಾದರೂ ಅನಂತರದ ದಿನಗಳಲ್ಲಿ ಸಾಮರಸ್ಯಕ್ಕೆ ಬದಲಾಗುವುದು, ಅವರು ಧಾರ್ಮಿಕ ವಿಚಾರಗಳಲ್ಲಿ ತಮ್ಮ ಐಕ್ಯಮತ್ಯದಿಂದ ಆಚರಣೆಗಳಲ್ಲಿ ಒಂದಾಗುವುದು, ಗ್ರಾಮನಿವಾಸಿಗಳ ಮೂಲ ಪ್ರವೃತ್ತಿಯನ್ನೆ ಸಾರುತ್ತದೆ.

ಈ ರೀತಿಯ ಗ್ರಾಮಾಚರಣೆಗಳಲ್ಲಿ ಊರಿನ ಎಲ್ಲಾ ಜಾತಿಮತದವರೂ ಪಾಲ್ಗೊಳ್ಳು-ತ್ತಿದ್ದರು. ಈಗಲೂ ಆ ರೀತಿಯ ಸನ್ನಿವೇಶವನ್ನು ನೋಡಬಹುದಾಗಿದೆ. 'ಹೊಲೆಯರ ದೋಣು, ದವಾನ, ಹರೆ, ತಮಟೆಗಳು ಮತ್ತು ಹಜಾಮರ ಓಲಗ' ಇದ್ದೆ ಇರಬೇಕು. ಯಾರೂ ಹಬ್ಬದ ಸಡಗರದಿಂದ ವಂಚಿತರಾಗಬೇಕಾಗಿರಲಿಲ್ಲ.

**ಮುಂಗೊಂಡ; ಹಿಂಗೊಂಡ:** ಸಾಮಾನ್ಯವಾಗಿ ಕೊಂಡಬಂಡಿ ಹಬ್ಬಗಳು ಹನ್ನೆರಡು ವರ್ಷಕ್ಕೊಮ್ಮೆ ನಡೆಯುವ ವಾಡಿಕೆಯಿದೆ. ಮೈಲಾರದಲ್ಲೂ ಹಾಗೆಯೇ. 'ಹನ್ನೆರಡು ಕಾಲೇಣಿ ಎತ್ತರಕ್ಕೆ ಊರಿನಲ್ಲಿ ಎಷ್ಟು ಮರ ಇವೆಯೋ ಅಷ್ಟು ಮರಗಳಿಂದ ಒಂದೊಂದು ಕೊಂಬೆ ಕಡಿದುಕೊಂಡು ಬಂದು ಕೊಂಡಹಾಕುತ್ತಾರೆ. ಕುಂಬಾರರ ಲಿಂಗಶೆಟ್ಟಿ ವೀರಭದ್ರಹಬ್ಬದಲ್ಲಿ 'ಮುಂಗೊಂಡ'ವನ್ನು (ಎಂದರೆ ಮೊದಲು ಕೊಂಡ ಹಾಯುವುದು) 'ಹಿಂಗೊಂಡ'ವನ್ನು (ಕೊನೆಯಲ್ಲಿ ಕೊಂಡ ಹಾಯುವುದು) ಕುರುಬರ ಬೀರೇಹೆಗ್ಗಡೆ ವೀರಭದ್ರನ 'ಹಲಗೆ'ಯನ್ನು ಹೊತ್ತುಕೊಂಡು ಹಾಯುತ್ತಿದ್ದ ಎಂದು ಸಾಂಸ್ಕೃತಿಕ ಇತಿಹಾಸವನ್ನು ದಾಖಲಿಸುತ್ತಾರೆ. ಇದು ಕುಂಬಾರರ, ಕುರುಬರರ ಪ್ರಾಮುಖ್ಯತೆಯನ್ನೂ ಸಕ್ರಿಯ ಪಾಲ್ಗೊಳ್ಳುವಿಕೆಯನ್ನೂ ಸೂಚಿಸುತ್ತದೆ.

ಮನೆಮನೆಗಳಲ್ಲಿ ದೇವರಿಗೆ ಪೂಜೆ ಮಾಡುವ ವಿಧಾನವೂ ಗ್ರಾಮಗಳಲ್ಲಿ ಸರಳವಾದುದು. ಅವರು ಸಂಜೆ ಹೊತ್ತು ದೀಪ ಹೊತ್ತಿಸುವುದಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಾರೆ. ಹಿಂದೆ ಸಾಮಾನ್ಯವಾಗಿ 'ಹಲಕು' ಇರುತ್ತಿತ್ತು. ಎಂದರೆ ಮರದಿಂದ ಮಾಡಿ ಗೋಡೆಗೆ ತಗುಲಿಸಿ ದೀಪ ಇಡುವ ಸ್ಥಳ. ಅದಕ್ಕೆ ತೊಪ್ಪೆ ಕಲೆಸಿಹಾಕಿ, ಕೈಯೆಣ್ಣೆ ಸೊಡರು ಹೊತ್ತಿಸಿ, ಕುಂಕುಮ ಹಚ್ಚಿ ಕೈಮುಗಿಯುತ್ತಿದ್ದರು.

---

೧. ಸೊನ್ನೆಯಿಂದ ಸೊನ್ನೆಗೆ, ಪು. ೨೩೯

ಮೈಲಾರದ ಗುರುಸಿದ್ದಯ್ಯನವರ ಶಿವಪೂಜೆ ಬಹಳ ಸರಳ. ತಮ್ಮ ಮನೆ ಹಿಂದಿನ ಹಿತ್ತಲಲ್ಲಿ ಬೆಳೆದ ಮಲ್ಲಿಗೆ ಹೂವು, ಅದು ಸಿಕ್ಕದ ಕಾಲದಲ್ಲಿ ಕಾಲಕಾಲಕ್ಕೆ ದೊರೆಯುವ ಹುಚ್ಚೆಳ್ಳು ಹೂವು, ಅವರೆ ಹೂವು, ಬಿಲ್ವಪತ್ರೆ, ಕೊಂಡಮಾವಿನಸೊಪ್ಪು ಇವೇ ಅವರು ದೇವರಿಗೆ ಅರ್ಪಿಸುತ್ತಿದ್ದ ಪತ್ರಪುಷ್ಪಗಳು. 'ಕರಡಿಗೆಯಲ್ಲಿದ್ದ ಲಿಂಗವನ್ನು ತೆಗೆದು ಎಡ ಅಂಗೈಯಲ್ಲಿಟ್ಟುಕೊಂಡು ಓಂ ಶಿವಾಯ ನಮಃ ಎಂದು ನೂರೊಂದು ಸಲ ಹೇಳಿಬಿಟ್ಟರೆ ಅವರ ಶಿವಪೂಜೆಯಾಯಿತು. ಗುರುಸಿದ್ದಯ್ಯನವರು ಬಾಹ್ಯಪೂಜೆಗಿಂತ ಅಂತರಂಗ ಪೂಜೆಗೆ ಹೆಚ್ಚು ಮಹತ್ವ ಕೊಟ್ಟಿದ್ದರು ಎಂದು ಹೇಳುವಲ್ಲಿ ಜನರ ಪೂಜಾವಿಧಾನಗಳನ್ನು ಕೃತಿ ದಾಖಲಿಸುತ್ತದೆ.

'ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಾಲಿ'..... ಎನ್ನುತ್ತಲೇ ಏಳುವ ಗ್ರಾಮ್ಯರು ಎಷ್ಟೋಂದು ಜನ ದೇವರು ಮತ್ತು ಅವರ ನಿಶ್ಚಿತ ಆಯ್ಕೆಯನ್ನು ಅವರೇ ಮಾಡುತ್ತಾರೆ. 'ಎಳ್ಳು ಜೀರಿಗೆ' ಕೊಡುವ ಭೂತಾಯಿಯೇ ಅವರ ನಿಜದೈವ. ಅವಳನ್ನು ಒಂದರಗಳಿಗೆ ನೆನೆದಾರು. ಗ್ರಾಮೀಣರು ತಮ್ಮ ಕಾಯಕದಲ್ಲೆ ದೇವರನ್ನು ಕಾಣುವರು. ಅವರು ಮಾಡುವ ದಾನಧರ್ಮ-ಗಳಲ್ಲಿ, ನುಡಿಗಳಲ್ಲಿ ನೆಮ್ಮದಿಯನ್ನು ಕಂಡುಕೊಂಡವರು. ಉದಾಹರಣೆಗೆ ದೊಡ್ಡಟ್ಟಿ ಕಲ್ಲೇಗೌಡರು ಶಿವಾಚಾರದವರಿಗೆ ಮತ್ತು ಊಟದೊತ್ತಿಗೆ ಬಂದವರಿಗೆ ಇಕ್ಕದೆ ಎಂದೂ ಉಂಡವರಲ್ಲ. ಇದು ಅಂದಿನ ಜನಜೀವನದ ಆದರ್ಶಸ್ಥಿತಿಯನ್ನೂ ನೈತಿಕತೆಯ ಮೇಲಿನ ಅವರ ಗಟ್ಟಿತನವನ್ನೂ ಸಾರುತ್ತದೆ. ಇಂತಹವರಿಗೆ ಪೂಜೆ ಅನಿವಾರ್ಯವಲ್ಲ. ಬಾಹ್ಯಾಚರಣೆಯೂ ಅಲ್ಲ. ಅದು ಅವರ ಕಾಯಕದಲ್ಲೆ ಬೆರೆತುಹೋಗಿರುತ್ತದೆ. ಇಂತಹ ಚಿತ್ರಗಳನ್ನು ಕಟ್ಟಿಕೊಡುವಲ್ಲಿ ಈ ಕೃತಿ ಎಲ್ಲೂ ಸೋಲುವುದಿಲ್ಲ.

--

## ಅಧ್ಯಾಯ : ಐದು

# ಜನಜೀವನ (ಜೀವನ ವಿಧಾನ)

'**ಸೊನ್ನೆಯಿಂದ ಸೊನ್ನೆಗೆ**' ಕಾದಂಬರಿ ಬಯಲು ಸೀಮೆಯ ಜೀವನ ವಿಧಾನವನ್ನು ಚಿತ್ರಿಸುತ್ತದೆ. ಬಯಲುಸೀಮೆಯ ಅದರಲ್ಲೂ ಮಂಡ್ಯ ಜಿಲ್ಲೆಯ ಮತ್ತು ಸುತ್ತಮುತ್ತಲ ಪ್ರದೇಶದ ಜನಜೀವನ, ರೀತಿನೀತಿಯೊಂದಿಗೆ ಈ ಕಥೆ ಬೆಸೆದುಕೊಂಡಿದೆ. ಹಿಂದೆ ಮಂಡ್ಯ ಜಿಲ್ಲೆ ತೀರಾ ಬೆಂಗಾಡು ಪ್ರದೇಶವಾಗಿತ್ತು. ಆದರೆ ಈಗ ನೀರಾವರಿಯಿಂದ ಕೂಡಿದೆ. ಭಾಷೆಯ ವಿಚಾರದಲ್ಲಿಯೂ ಇಲ್ಲಿಯ ಜನ ಕೊಂಚ ವೈಶಿಷ್ಟ್ಯತೆಯನ್ನು ಹೊಂದಿದ್ದಾರೆ. ಇಲ್ಲಿಯ ಜನರ ಭಾಷೆಗೂ, ಬೇರೆ ಬಯಲು ಸೀಮೆಯ ಜನರು ಮಾತಾಡುವ ಭಾಷೆಗೂ ತುಸು ವ್ಯತ್ಯಾಸವುಂಟು. ಒಂದು ರೀತಿ ರಾಗವಾಗಿ ಅಂದರೆ ದೀರ್ಘವಾಗಿ ಎಳೆದು ಮಾತನಾಡುತ್ತಾರೆ. 'ಹೋಗೋಣ', 'ಬರೋಣ' ಅಥವಾ 'ಹೋಗುವ', 'ಬರುವ' ಎಂಬುದಕ್ಕೆ 'ಹೋಗ್ಮಾ, ಬರ್ಮಾ' ಎನ್ನುತ್ತಾರೆ. 'ಎಲ್ಲರಿಗೂ' ಬದಲು 'ಎಲ್ಕಾ' ಎನ್ನುತ್ತಾರೆ. ಈ ವೈಶಿಷ್ಟ್ಯವುಳ್ಳ ಭಾಷೆಯನ್ನು ಗ್ರಂಥದಲ್ಲಿ ತರುವುದು ನನ್ನ ಉದ್ದೇಶವಾಗಿತ್ತು.... ಈ ಕಾರಣದಿಂದ ಬೇರೆ ಯಾವ ಪ್ರದೇಶದಲ್ಲಾದರೂ ನಾಟಿ ಹಾಕಿ ಬೆಳೆಸಬಹುದಾಗಿದ್ದ ಈ ಕಾದಂಬರಿಯ ಕಥೆಯನ್ನು ಮಂಡ್ಯ ಸುತ್ತಮುತ್ತ ಪ್ರದೇಶದಲ್ಲಿ ನೆಟ್ಟು ಬೆಳೆಸಲಾಗಿದೆ...."[೧]

ಕೃತಿಕಾರರು ಬಯಲುಸೀಮೆಯಲ್ಲಿ ಹುಟ್ಟಿ ಬೆಳೆದದ್ದರಿಂದ ಆ ಭಾಷೆಯೇ ಈ ಕೃತಿ ರಚನೆಗೆ ಪ್ರೇರಣೆಯಾಗಿದೆ. ಅಂದಿನ ಕೃತಿಯಲ್ಲಿ ಕಾಣಿಸಿಕೊಂಡ ಭಾಷಾ ವೈಶಿಷ್ಟ್ಯ ಇಂದಿಗೂ ಜೀವಂತವಾಗಿದೆ. ಹೋಗ್ಮಾ, ಬರ್ಮಾ, ಎಲ್ಕಾ ಎಂಬ ಶಬ್ದಗಳನ್ನು ಈ ಭಾಗದ ಜನರು ಇಂದಿಗೂ ಬಳಸುತ್ತಿದ್ದು, ಇದು ಈ ಪ್ರದೇಶಕ್ಕಷ್ಟೆ ಸೀಮಿತವಾದ ವಿಶೇಷತೆಯಾಗಿದೆ. ಜೀವನ ವಿಧಾನದಲ್ಲಿ ಇತರ ಪ್ರದೇಶದ ಪ್ರಭಾವವಿದ್ದರೂ ಭಾಷಿಕ ನೆಲೆಯಲ್ಲಿ ತನ್ನದೇ ಆದ ಗಟ್ಟಿನೆಲೆಯನ್ನು ಇಂದಿಗೂ ಕಾಣಬಹುದು.

ಮಂಡ್ಯ ತಾಲ್ಲೂಕು ವ್ಯವಸಾಯ ಪ್ರಧಾನವಾದ ಪ್ರದೇಶವಾಗಿದೆ. ಒಕ್ಕಲುತನವೇ ಜೀವನಾಧಾರ: ರಾಗಿ, ಭತ್ತ, ಕಬ್ಬು ಪ್ರಧಾನ ಬೆಳೆಗಳಾಗಿವೆ. ಹಿಂದೆ ಬೆಂಗಾಡಾಗಿದ್ದುದರಿಂದ ರಾಗಿಯೇ ಪ್ರಧಾನ ಬೆಳೆಯಾಗಿತ್ತು. ಊರಿಗೆ ಹಿರಿಯರಾಗಿ ಪಟೇಲರು, ಗೌಡರು ಇರುತ್ತಿದ್ದರು. ಊರಿನ ಒಳಿತು ಕೆಡಕುಗಳಲ್ಲಿ ಸಕ್ರಿಯವಾಗಿ ಭಾಗಿಯಾಗಿ, ಮುಂದಾಳತ್ವದಿಂದ ಹಬ್ಬಹರಿದಿನಗಳನ್ನು ನಡೆಸಿಕೊಡುತ್ತಿದ್ದವರು ಪಟೇಲರು–ಗೌಡರು. ಇವರಿಗೆ ಅವರದೇ ಆದ ವೈಷಮ್ಯಗಳಿದ್ದರೂ ಊರೊಟ್ಟಿನ ಕಾರ್ಯಗಳಲ್ಲಿ ಒಂದಾಗುತ್ತಿದ್ದರು. ಆದರೂ ಕೆಲವೊಮ್ಮೆ ಆ ವೈಷಮ್ಯ ಊರೆದುರಿಗೆ ಪ್ರದರ್ಶನವಾಗುತ್ತಿದ್ದ ನಿದರ್ಶನಗಳೂ ಇಲ್ಲದಿಲ್ಲ.

---

೧. ಸೊನ್ನೆಯಿಂದ ಸೊನ್ನೆಗೆ, ಮುನ್ನುಡಿ

ಊರಿನ ಯಾವುದೇ ಮುಖ್ಯ ವಿಚಾರದ ಬಗೆಗೆ, ಉದಾಹರಣೆಗೆ ದೇವರ ಪೂಜೆ, ಉತ್ಸವ, ಮೆರವಣಿಗೆ ಇತ್ಯಾದಿಗಳಿಗೆ ಹಿರಿಯರನ್ನು ಕೇಳಿ ತೀರ್ಮಾನಿಸುವ ಪರಿಪಾಠವಿತ್ತು. ಕಾದಂಬರಿಯಲ್ಲಿ ಪಟೇಲ್ ದೊಡ್ಡನಿಂಗೇಗೌಡರು ಮತ್ತು ಅವರ ಮಗ ಪಟೇಲ್ ಕುಳ್ಳೇಗೌಡರಿಗಿಂತ ಕಲ್ಲೇಗೌಡರು ಮತ್ತು ಅವರ ಮಗ ಮಲ್ಲೇಗೌಡರ ಉದಾತ್ತ ನಿಲುವಿನ ಚಿತ್ರಣ ನೀಡಿದ್ದಾರೆ. ಹೊರಗಿನಿಂದ ಬಂದ ದಾರಿಹೋಕರಿಗೆ (ಶಿವಾಚಾರದವರಿಗೆ) ಗುರುಸಿದ್ದಯ್ಯ ಅವರ ಮನೆಯಲ್ಲಿ ಊಟೋಪಚಾರಕ್ಕೆ ವ್ಯವಸ್ಥೆಯಾಗುತ್ತಿತ್ತು. ಹೇಳಿಕೇಳಿ ಗುರುಸಿದ್ದಯ್ಯನವರೂ ಶಿವಾಚಾರದವರೇ. ಒಂದು ವೇಳೆ ಅವರ ಮನೆಯಲ್ಲಿ ಏನಾದರೂ ಈ ವ್ಯವಸ್ಥೆಗೆ ಭಂಗಬಂದಲ್ಲಿ ಗೌಡಕುಳಗಳು ತಮ್ಮ ಮನೆಗೆ ಕರೆದೊಯ್ದು ಅಕ್ಕಿ ಪಡಿಕೊಟ್ಟು ಅಟ್ಟುಣ್ಣಲು ವ್ಯವಸ್ಥೆ ಮಾಡುತ್ತಿದ್ದರು. ಅದಕ್ಕೆ ಬೇಕಾದ ಪರಿಕರಗಳಾದ ಎತ್ತೊಲೆ, ಒಂದು ಪಾವು ಅಕ್ಕಿ, ಸ್ಯಾರೆ ಬೇಳೆ, ಉಪ್ಪು, ಹುಣಸೇಹಣ್ಣು, ಸೌದೆಪುಳ್ಳೆ, ಕಾರದಪುಡಿ ಮೊದಲೇ ಅಟ್ಟದಲ್ಲಿ ಸಿದ್ಧವಾಗಿರುತ್ತಿದ್ದವು.[೧]

ಹಾಸಲು ಹೊದೆಯಲು ಈಚಲು ಚಾಪೆಯನ್ನು ಇಡುವುದನ್ನು ಮರೆಯುತ್ತಿರಲಿಲ್ಲ. ಬಂದವರೇನಾದರೂ ಸೋಮಾರಿಗಳಾಗಿ ಅಟ್ಟುಣ್ಣಲು ಹಿಂದೆ ಮುಂದೆ ನೋಡುತ್ತಿದ್ದರೆ ಹಣೇಗೆ ಬರೀ ಈಭೂತಿ ಇಕ್ಕೊಂಡು ಮನಿಕೋತ್ತಿವಿ ಅಂದವರಿಗೆ ಗೌಡರು 'ಅಯೋ ಬರೀ ಈಭತ್ತಿ ಭಕ್ತರ ಕೆಡಸ್ತು ಅಂತ ಸುಮ್ನೆ ಅನ್ನೋದಿಲ್ಲ ನೀವಡಿಗೆ ಮಾಡ್ಕೊಂಡು ಉಂಡು ಮಲಿಕೊಳ್ಳಂಗಿದ್ರೆ ಇಲ್ಲಿ ಮಲೀಕೊಳ್ಳಿ. ಇಲ್ದಿದ್ರೆ ಚಾವಡೀಲ್ಹೋಗಿ ಮನಿಕೊಳ್ಳಿ'[೨] ಎಂದು ನಿಷ್ಠುರವಾಗಿ ಗೌಡರು ಹೇಳುತ್ತಿದ್ದರು. ಅತಿಥಿಯಾದವನು ಗೃಹಸ್ಥನ ಮನೆಯಲ್ಲಿ ಹಸಿದು ಮಲಗಿದರೆ ಇವನ ಭಾಗ್ಯವನ್ನೆಲ್ಲ ಅವನು ಹೊತ್ಕೊಂಡು ಹೋಗುತ್ತಾನೆ ಎಂಬ ಭಾವನೆ ಅಂದಿನ ಕಾಲದ ಜನರಲ್ಲಿತ್ತು. ಇಂತಹ ಭಾವನೆಯುಳ್ಳವರಲ್ಲಿ ಕಲ್ಲೇಗೌಡರೂ ಒಬ್ಬರು.

ಹತ್ತು-ಹದಿನೈದು ವರ್ಷದ ಮಗನನ್ನು ಒಂದೇ ಗಂಗಳದಲ್ಲಿ ಒಟ್ಟಿಗೆ ಕೂರಿಸಿಕೊಂಡು ಊಟ ಮಾಡಿಸುತ್ತಿದ್ದರು. ಅಪ್ಪಯ್ಯನ ನೆರಳಲ್ಲಿ ಬೆಳೆದ ಮಲ್ಲಯ್ಯ ಮಲ್ಲೇಗೌಡನಾದಾಗ ಅಪ್ಪನಂತೆ ಆಚಾರ-ವಿಚಾರಗಳನ್ನು ಮೈಗೂಡಿಸಿಕೊಂಡಿದ್ದ. ಹೆಂಡತಿ ಮನೆಯ ಎಂಜಲು ತೆಗೆಯುವುದರ ಜೊತೆಗೆ ಗುರುಗಳ ಮನೆಯ ಎಂಜಲನ್ನೂ ತೆಗೆಯಬೇಕಾಗಿತ್ತು. ಇದು ಒಂದು ರೀತಿಯ ನೇಮವಾಗಿತ್ತು. ಈ ನಿಯಮ ಪಾಲನೆ ಗೌಡರ ಹೆಂಡತಿಯಿಂದ ಸಾಗುತ್ತಿತ್ತು. ಗುರುಗಳ ಹೆಂಡತಿ ಎಂಜಲು ತೆಗೆಯಬಾರದೆಂಬುದು ಕಲ್ಲೇಗೌಡರ ತರ್ಕವಾಗಿತ್ತು.

ಶಿವಾಚಾರ ಕುಟುಂಬದ ರೈತರ ಮಕ್ಕಳು ಮಾಂಸಾಹಾರಿಗಳಾದ ಒಕ್ಕಲಿಗರಂತೆಯೇ ಎಲ್ಲಾ ಪ್ರಾಣಿಗಳನ್ನು ಸಾಕುತ್ತಿದ್ದರು. ಆದರೆ ಕೋಳಿಗಳನ್ನು ಸಾಕುತ್ತಿರಲಿಲ್ಲ. ಈ ವ್ಯವಸ್ಥೆಯನ್ನು

---

೧. ಸೊನ್ನೆಯಿಂದ ಸೊನ್ನೆಗೆ, ಪು. ೪, ೫

೨. ಅದೇ

ಇಂದಿನ ಸಮಾಜದಲ್ಲೂ ಕಾಣಬಹುದು. ಲಿಂಗಾಯಿತರ ಮನೆಗಳಲ್ಲಿ ಆಡುಕುರಿ ಸಾಕುವುದು ಸರ್ವೇಸಾಮಾನ್ಯ. ಆದರೂ ಇಂದಿಗೂ ಕೋಳಿಗಳನ್ನು ಅವರು ಸಾಕುವುದಿಲ್ಲ.

ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ ಸ್ಲೇಟ್ ಇಲ್ಲದ ಕಾಲ ಅದು. ಕೈಬೆರಳಿಗೆ ಗೆಜ್ಜುಗ ಹಾಕಿಕೊಂಡು ಮರಳಿನಲ್ಲಿ ತಿದ್ದಬೇಕು. ಬೂತಾಳೆ ಪಟ್ಟೆಯ ಮೇಲೆ ಅದರ ಮುಳ್ಳಿನಿಂದಲೇ ಬರೆಯಬೇಕಾಗಿತ್ತು[೧] ವಿದ್ಯಾಭ್ಯಾಸಕ್ಕೆ ಕೂಲಿಮಠಗಳು ಇರುತ್ತಿದ್ದವು. ಇದರ ವ್ಯವಸ್ಥೆಯನ್ನು ಊರಿನ ಗೌಡರು, ಮುಖಂಡರು ಮಾಡುತ್ತಿದ್ದರು.

ರಾತ್ರಿ ಊಟವಾದ ನಂತರ ಓದು ಬರಹ ಬಲ್ಲವರಿಂದ ರಾಜಶೇಖರ ವಿಳಾಸ, ನಳಚರಿತ್ರೆಗಳನ್ನು ಓದಿಸಲಾಗುತ್ತಿತ್ತು. ಜೊತೆಗೆ ಕಷ್ಟಸುಖಗಳನ್ನು ಮಾತನಾಡಿಕೊಳ್ಳುವುದು ವಾಡಿಕೆಯಾಗಿತ್ತು. ಅಂದಿನ ಕಾಲದ ಪುಸ್ತಕದಲ್ಲಿ ಅಕ್ಷರಗಳು ಇಂದಿನಂತೆ ಸಣ್ಣವಾಗಿರಲಿಲ್ಲ. ದೀಪದ ಬೆಳಕಿನಲ್ಲೂ ಕಾಣುವಷ್ಟೂ ದಪ್ಪದಪ್ಪ ಅಕ್ಷರಗಳಿದ್ದು ಅನಾಯಾಸವಾಗಿ ಓದಬಹುದಾಗಿತ್ತು.[೨] ಇಪ್ಪೇಬೀಜ, ಹೊಂಗೆಬೀಜ; ಬೇವಿನಬೀಜ ಆಯುವುದು ಮಕ್ಕಳಿಗೆ ಪರಿಪಾಠವಾಗಿತ್ತು. ಅದರ ಎಣ್ಣೆಯಿಂದ ದೀಪ ಉರಿಸುತ್ತಿದ್ದರು.[೩] ಇಂಥ ಮಾಹಿತಿಗಳು ಕೃತಿಯ ಪುಟಪುಟದಲ್ಲೂ ಹೇರಳವಾಗಿ ಸಿಗುತ್ತವೆ.

ಮಳೆರಾಯನ ಮುನಿಸು ಬರದ ರೂಪದಲ್ಲಿ ಕಾಣಿಸುತ್ತದೆ. ಮಳೆ ಬಾಳಿಗಾಧಾರ. ಮಳೆ ಕೈಕೊಟ್ಟರೆ ಬರಕ್ಕೆ ಮೈಯೊಡ್ಡಲೇಬೇಕು. ಬರದ ಹೊತ್ತಲ್ಲಿ ಬೆಳೆಯಿಲ್ಲದೆ ''ಕಾರೆಸೊಪ್ಪು, ಬೂತಾಳೆಗೆಡ್ಡೆಗಳನ್ನು ಉತ್ತರಿಸಿ ಅದಕ್ಕೆ ಉಗಣೆಸೊಪ್ಪಿನ ಚಿಗುರು ಸೇರಿಸಿ ಬೇಯಿಸಿ ತಿಂದರು.... ಅದು ಬೂತಾಳೆಗೆಡ್ಡೆಬರ'... ಆಗ 'ಕುಡ್ಲಾಕಿ ಕೊಯ್ಲಿಲ್ಲ ಕಣಕ್ಕೆ ಮೇಟಿ ನೆಡ್ಲಿಲ್ಲ'.....[೪] ಎಂಬ ಐತಿಹಾಸಿಕ ಸತ್ಯದ ಜೊತೆಗೆ ಬರದಲ್ಲಿನ ಜನಜೀವನ ಚಿತ್ರಣವನ್ನು ಇಲ್ಲಿ ಕಾಣಬಹುದಾಗಿದೆ.

ಮಂಡ್ಯ ಜಿಲ್ಲೆಯ ಒಕ್ಕಲುಮಕ್ಕಳ ಜೀವನದ ವೈಶಿಷ್ಟ್ಯಗಳನ್ನು ಗುರುತಿಸುವಾಗ ಅವರ ಪ್ರೀತಿಪಾತ್ರವಾದ ಬಾಡಿನೂಟವನ್ನು ಹೇಳದಿದ್ದರೆ ಅದು ಕೊರತೆ ಎನಿಸುತ್ತದೆ. ಅದರಲ್ಲಿ ಅವರು 'ಕುರಿ ಕೊಯ್ದು ಪಾಲು ಹಾಕುವುದು' ವಿಶೇಷವಾದ ಅಂಶವೇ ಸರಿ. ಹಬ್ಬ, ಉತ್ಸವಗಳಲ್ಲಿ 'ಬಾಡೂಟ' ಸಾಮಾನ್ಯವಾದುದು. ಕುರಿಯನ್ನೋ ಮೇಕೆಯನ್ನೋ ದನದ ಹಟ್ಟಿಯಲ್ಲೆ ಕೊಯ್ದು ನೇತಾಕಿ ಪಾಲಾಕುವುದು ಸಾಮಾನ್ಯವಾಗಿ ಕಾಣುವ ದೃಶ್ಯ.[೫]

---

೧. ಸೊನ್ನೆಯಿಂದ ಸೊನ್ನೆಗೆ, ಪು. ೧೭೧

೨. ಅದೇ, ಪು. ೮೮

೩. ಅದೇ, ಪು. ೭೦

೪. ಅದೇ, ಪು. ೩೯

೫. ಅದೇ, ಪು. ೪೫

ಸಾಮೂಹಿಕವಾಗಿ ಹಬ್ಬ ಆಚರಿಸುವಾಗ ಬಾಡನ್ನು 'ಪಾಲು' ಅಥವಾ 'ಗುಡ್ಡೆ' ಹಾಕಿ ಹಂಚಿಕೊಳ್ಳುವುದು ಇಂದಿಗೂ ವಾಡಿಕೆಯಲ್ಲಿದೆ.

ಅಂದಿನ ಜನಗಳ ಬೇಕು ಬೇಡಗಳು ಪರಿಮಿತವಾಗಿದ್ದವು. ಆಹಾರ ವಿಹಾರಗಳಲ್ಲಿ, ಉಡುಗೆ-ತೊಡುಗೆಗಳಲ್ಲಿ ಸರಳತೆ ಎದ್ದುಕಾಣುತ್ತಿತ್ತು. 'ಆಗ ಜನಗಳಿಗೆ ಬೇಕಾಗಿದ್ದುದು ಮೆಣಸು, ಜೀರಿಗೆ, ಮೆಂತ್ಯ, ಸೂಜಿ ದಬ್ಬಳ ಅಷ್ಟೆ. ದೇವರಿಗೆ ಗಂಧದ ಕಡ್ಡಿ ಹಚ್ಚುತ್ತಿರಲಿಲ್ಲ; ಧೂಪ, ಸಾಂಬ್ರಾಣಿ, ಹಾಲುಮಡ್ಡಿ ಇವನ್ನೇ ಹಾಕುತ್ತಿದ್ದುದ್ದು. ಬಟ್ಟೆಗಳನ್ನು ಊರಿನ ಹೊಲೆಯರು ನೇಯ್ದುಕೊಡುತ್ತಿದ್ದರು. ಗ್ರಾಮದ ಜನರಲ್ಲಿ ಪರಸ್ಪರ ಸಹಕಾರ ಮನೋಭಾವ-ಗಳಿಗೆ ಕೊರತೆಯಿರಲಿಲ್ಲ. ಕಷ್ಟಸುಖಕ್ಕೆ ಆಗುವ, ಧರ್ಮಕರ್ಮ ನೋಡುವ ಗುಣವಿತ್ತು. ಊರಿನ ನ್ಯಾಯ ತೀರ್ಮಾನಿಸುವ ಗೌಡರನ್ನು ಮಾವ! ಮಾವ! ಎಂದು ಕರೆಯುವ ರೂಢಿಯಿತ್ತು.[೧] ಚನ್ನೇಗೌಡರನ್ನು ಊರಿನ ಜನ 'ಚನ್ನಮಾವ' ಎಂತಲೂ ಸರ್ವಜ್ಞ ಸಂಗಣ್ಣನನ್ನು ಸಂಗಮಾವ ಎಂದು ಚನ್ನ ಕರೆಯುವುದನ್ನು ಉಲ್ಲೇಖಿಸಬಹುದು. 'ಮಾವ' ಎಂಬ ಸಂಬೋಧನೆ ಪ್ರೀತಿಯ, ಗೌರವದ ಧ್ಯೋತಕವಾಗಿಯೂ ಇದೆ.

### ೩.೧. **ಆಹಾರಪದ್ಧತಿ**

ಕರ್ನಾಟಕದ ಅಡುಗೆ ಪದ್ಧತಿಯನ್ನು ಗಮನಿಸಿದಾಗ ಅಲ್ಲಿ ಅನೇಕ ವೈವಿಧ್ಯತೆ ಕಂಡುಬರುತ್ತವೆ. ಅದರಲ್ಲೂ ಭಾರತದಂಥ ಬಹುಮುಖ ಸಂಸ್ಕೃತಿಯ ದೇಶದಲ್ಲಿ ಏಕರೂಪದ ಆಹಾರಪದ್ಧತಿ ಅಸಂಭವ. ವ್ಯಕ್ತಿಯೊಬ್ಬನ ಆಹಾರ ಆತನ ಭೌಗೋಳಿಕ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳನ್ನು ಅವಲಂಬಿಸಿರುತ್ತದೆ.

ಗ್ರಾಮೀಣರಲ್ಲಿ ಆಹಾರಪದ್ಧತಿ ಸರಳವಾಗಿರುತ್ತದೆ. ಜನಪದರ ಅಡುಗೆ ಕಲೆ ವಿಶಿಷ್ಟವಾದುದು. ಅವರು ವಿವಿಧ ಅಡುಗೆಗಳನ್ನು ಸಂದರ್ಭಾನುಸಾರವಾಗಿ ತಯಾರಿಸುತ್ತಾರೆ. ಸಾಮಾನ್ಯದಿನದ ಅಡುಗೆಗಳು, ಹಬ್ಬಹರಿದಿನದ ಅಡುಗೆಗಳು, ಸುಗ್ಗಿ ತಿನಿಸುಗಳು, ಗ್ರಾಮದೇವತೆ ಅಡುಗೆಗಳು, ಮೈನೆರೆದಾಗ, ಹೊಸಮನೆಗೆ ಹೋದಾಗ, ಮದುವೆ, ತಿಥಿ – ಹೀಗೆ ಬೇರೆಬೇರೆ ಸಮಯದಲ್ಲಿ ಮಾಡುವ ತಿನಿಸುಗಳಲ್ಲಿ ವೈವಿಧ್ಯತೆಯಿದೆ. ಕೆಲವೊಂದು ಆಚರಣೆಗಳಲ್ಲಿ ಕ್ರಮಬದ್ಧವಾದ ನಿಯಮವನ್ನು ಆಚರಿಸುತ್ತಾರೆ.

ಮಂಡ್ಯಜಿಲ್ಲೆಯ ಸುತ್ತಮುತ್ತಲ ಆಹಾರದ ವೈಶಿಷ್ಟ್ಯವನ್ನು ಕಾದಂಬರಿಯಲ್ಲಿ ಕಾಣಬಹುದು. ಅಡುಗೆ-ಆಹಾರ ಆಯಾಯ ಪ್ರದೇಶದ ವಾಯುಗುಣ, ಭೂಗುಣ, ನೀರು ಸರಬರಾಜುಗಳನ್ನು ಅವಲಂಬಿಸಿರುತ್ತದೆ. ನೀರಾವರಿ ಸೌಲಭ್ಯ ಇಲ್ಲದಿದ್ದುದರಿಂದ ರಾಗಿ ಮತ್ತು ಅವರೇಕಾಳು ಪ್ರಧಾನ ಬೆಳೆಯಾಗಿದ್ದವು. ರಾಗಿಮುದ್ದೆ ಪ್ರಧಾನ ಆಹಾರ. ಅನ್ನ ಇಲ್ಲದಿದ್ದರೂ ಜೀವನ ನಡೆಯುತ್ತಿತ್ತು.

---

೧. ಸೊನ್ನೆಯಿಂದ ಸೊನ್ನೆಗೆ, ಪು. ೧೬೮

ಕಾದಂಬರಿಯಲ್ಲಿ ಒಕ್ಕಲ ಮಕ್ಕಳ ಊಟೋಪಚಾರದ ವಿಚಾರಗಳು ದಂಡಿಯಾಗಿ ಚಿತ್ರಣಗೊಂಡಿವೆ. ಅವರ ಆಹಾರ, ಅದನ್ನು ಬಳಸುವ ಪರಿ ವೈಶಿಷ್ಟಪೂರ್ಣವಾದುದು. ಆ ಪ್ರದೇಶಕ್ಕೆ ಸೀಮಿತವಾದ ಅನೇಕ ವಿಚಾರಗಳು ಈ ಕಾದಂಬರಿಯಲ್ಲಿ ಅನಾವರಣಗೊಂಡಿವೆ.

ಲೇಖಕರು ಮಲ್ಲೇಗೌಡರು ಊಟಮಾಡುವ ವಿಧಾನವನ್ನು ವರ್ಣಿಸುತ್ತಾ, ಹೆಂಡತಿ ಕೊಟ್ಟ ಬಿಸಿಬಿಸಿ ರೊಟ್ಟಿಯನ್ನು ಎಡಗೈ ಅಂಗೈ ಮೇಲೆ ಇಟ್ಟುಕೊಂಡು ಅದರ ಮೇಲಿದ್ದ ಹುಚ್ಚೆಳ್ಳು ಕಾರ ಮತ್ತು ಬಿಸಿಗೆ ಕರಗುತ್ತಿದ್ದ ಬೆಣ್ಣೆಯಲ್ಲಿ ರೊಟ್ಟಿ ಚೂರನ್ನು ಅದ್ದಿ ತಿನ್ನಲಾರಂಭಿಸಿದರು. ತಿಂದಾದ ಮೇಲೆ ಒಂದು ಕಂಚಿನ ಲೋಟದಲ್ಲಿ ತಂದಿಟ್ಟ ಮಜ್ಜಿಗೆಯನ್ನು ಗಟಗಟ ಕುಡಿದರು....."[೧] ಎನ್ನುವುದನ್ನು ಗಮನಿಸಿದಾಗ ಮಜ್ಜಿಗೆಯನ್ನು ಕುಡಿಯುವುದರಿಂದ ದಾಹದ ಇಳಿಕೆಯಾಗುವುದನ್ನು ಜನಪದರು ಅರಿತಿದ್ದರು.

ಉಪ್ಸಾರು, ಮಸೊಪ್ಪು, ರಾಗಿಮುದ್ದೆ. ಈ ಪ್ರದೇಶದ ವಿಶೇಷ ಅಡುಗೆಗಳು. "ಆಗಿನ ಕಾಲದಲಿ ಅನ್ನಕ್ಕಿಂತ ಹಿಟ್ಟೆ ಮುಖ್ಯವಾಗಿತ್ತು. ಅನ್ನಭೋಗ್ಯ ವಸ್ತುವಾಗಿ, 'ಹೊಟ್ಟೆ ತುಂಬ ಹಿಟ್ಟು, ಬಾಯ್ತುಂಬ ಅನ್ನ' ಎಂಬುದೇ ಬದುಕಿನ ದಾರಿಯಾಗಿತ್ತು"[೨] ಎನ್ನುವಲ್ಲಿ ನೀರಾವರಿ ಸೌಲಭ್ಯವಿಲ್ಲದ ಮಂಡ್ಯಜಿಲ್ಲೆಯ ಜನರಿಗೆ ಅನ್ನ (ಅಕ್ಕಿ) ಕೈಗೆಟುಕದಾಗಿದ್ದುದನ್ನು ಕೃತಿ ದಾಖಲಿಸಿದೆ.

ಅನ್ನ ಅಪರೂಪವಾಗಿದ್ದ ಕಾಲವದು. ಆಹಾರಪದಾರ್ಥಗಳು ಮೈಸೂರಿನಿಂದ ಮಂಡ್ಯಕ್ಕೆ ಅಲ್ಲಿಂದ ಮೈಲಾರಕ್ಕೆ ಬರುತ್ತಿದ್ದವು. ಎಷ್ಟೆಲ್ಲ ಹಣಕಾಸನ್ನು ಸಂಪಾದಿಸುತ್ತಿದ್ದರೂ ಚನ್ನನು ಅವನ ಮನೆಯಲ್ಲಿ ಅನ್ನ ಊಟ ಮಾಡಿರಲಿಲ್ಲ. ಅಂದು ನಾಲ್ಕಾಣೆ ಕೊಟ್ಟು ೨ ಸೇರು ಅಕ್ಕಿ ತಂದ..... ಮದುವೆಯಾದ ನಂತರ ಚೌಡಿ-ಚನ್ನರು ಅನ್ನ ಉಂಡದ್ದನ್ನು ವಿಶೇಷವೆಂಬಂತೆ ದಾಖಲಿಸಿರುವುದನ್ನು ನೋಡಿದರೆ ಅಂದಿನ ಕಾಲದಲ್ಲಿ ಅಕ್ಕಿಯ ದುರ್ಲಭತೆಯನ್ನು ಮನಗಾಣಬಹುದಾಗಿದೆ.

ಚನ್ನ ಚನ್ನೇಗೌಡನಾಗುವ ಮೊದಲು, ತಂದೆಯನ್ನು ಕಳಕೊಂಡು ಅವರಿವರ ಮನೆಯ ತಿರುಕನಾಗಿದ್ದಾಗ ಒಣರೊಟ್ಟಿ, ತಂಗಳು ಹಿಟ್ಟನ್ನು ತಿನ್ನುತ್ತಿದ್ದನು. ತಂಗಳು ಹಿಟ್ಟನ್ನು ನಾಲ್ಕಾರು ಹರಳು ಉಪ್ಪಿನಲ್ಲಿ ಮಿದ್ದು ಯಾರಾದರೂ ಕೊಟ್ಟ ಈರುಳ್ಳಿಯನ್ನು ನೆಂಚಿಕೊಂಡು ತಿನ್ನುವುದು ಅವನಿಗೆ ರೂಢಿಯಾಗಿತ್ತು.

'ಉಪ್ಸಾರು' ಬಯಲುಸೀಮೆಯ ಅದರಲ್ಲೂ ಮಂಡ್ಯ, ನಾಗಮಂಗಲ ಸುತ್ತಮುತ್ತ ಪ್ರಚಲಿತವಿರುವ ಒಂದು ರೀತಿಯ ಉದಕ. ಕಾಳು ಅಥವಾ ಸೊಪ್ಪನ್ನು ಉಪ್ಪುಹಾಕಿ ಬೇಯಿಸಿ ಬಸಿದು, ಗೊಡ್ಡಾರ ಹಾಕಿ ಮುದ್ದೆ ಜೊತೆ ಉಣ್ಣಲು ಬಳಸುತ್ತಾರೆ.

---

೧. ಸೊನ್ನೆಯಿಂದ ಸೊನ್ನೆಗೆ, ಪು. ៩៩

೨. ಅದೇ, ಪು. ೭೪

**ಮಸೊಪ್ಪು:** ಮಸೆದ ಸೊಪ್ಪು ಮಸೊಪ್ಪು ಆಗಿದೆ. ಕೀರೆಸೊಪ್ಪು ಅಥವಾ ವಿವಿಧ ರೀತಿಯ ಸೊಪ್ಪುಗಳನ್ನು ಈರುಳ್ಳಿ, ಬೆಳ್ಳುಳ್ಳಿ ಜೊತೆ ಬೇಯಿಸಿ ಬಸಿದು, ಮಸೆದು ಮಾಡಿದ ಸಾರು ಮಸೊಪ್ಪು. ಸೀಗಡಿ ಹಾಕಿ ಮಾಡಿದ ಮಸೊಪ್ಪು ಬಹಳ ರುಚಿಯಾಗಿರುತ್ತಿತ್ತು. ಮಲ್ಲೇಗೌಡರು ಹೆಂಡತಿ ತಿಮ್ಮಾಜಮ್ಮ ಸೀಗಡಿ ಹಾಕಿ ಮಾಡಿದ ಮಸೊಪ್ಪನ್ನು ಮೂರು ದಿನ ನೆನೆಸಿಕೊಳ್ಳುತ್ತಾರೆ. "ಆಕೆ ಬರಿ ಮಸೊಪ್ಪು ಮಾಡುತ್ತಿರಲಿಲ್ಲ. ಒಂದು ನಾಲ್ಕು ಚೂರು ಬದನೆಕಾಯಿ, ಮೊಟ್ಟೆ ಸೀಗಡಿ ಅಂದರೆ ದಪ್ಪಸೀಗಡಿ – ಇಷ್ಟನ್ನೂ ಹಾಕಿ ಸಾರು ಮಾಡಿ ಕಲ್ಲೊಗ್ಗರಣೆ ಹಾಕಿದಳು ಎಂದರೆ ವಾಸನೆ ಊರಿಗೆಲ್ಲ ಹಬ್ಬುವುದು.... ಕಲ್ಲೊಗ್ಗರಣೆ ಎಂದರೆ ಕಲ್ಲನ್ನು ಗೋಡೆ ಮೇಗಲ ಕಲ್ಲೇ ಆಗಬೇಕು. ಬೇರೆ ಕಲ್ಲು ಆಗದು – ಗೋಡೆಯಿಂದ ಸಣ್ಣ ಕಲ್ಲೊಂದನ್ನು ಕಿತ್ತುಕೊಂಡು ಬಂದು ಅದನ್ನು ಒಲೆಯಲ್ಲಿಟ್ಟು ಕೆಂಪಗೆ ಕಾಯಿಸಿ ಅದು ಚಟಪಟ ಎಂದ ಮೇಲೆ ವಗ್ಗರಣೆ ಹಾಕಿ ಸಾರಿನೊಳಕ್ಕೆ ಚೊಯ್ ಎನ್ನುವಂತೆ ಅದ್ದುವುದು.... ಇದರ ಜೊತೆಗೆ ಗೋಡೆಗೆ ಹೊಡೆದರೆ ಹಿಂದಕ್ಕೆ ಪುಟಹಾರಿ ವಾಪಸು ಬರುವಂತಹ ಹಿಟ್ಟು...." ಇವುಗಳು ಗೌಡರಿಗೆ ಬಹಳ ಪ್ರಿಯವಾದ ಅಡುಗೆಯಾಗಿದ್ದವು.

'ಕಲ್ಲೊಗ್ಗರಣೆ'ಯಲ್ಲಿ ಗ್ರಾಮ್ಯರು ಎಣ್ಣೆ ಉಪಯೋಗಿಸದೆ ಇರುವುದು ಒಂದು ವಿಶಿಷ್ಟವಾಗಿದೆ. ಕಾದ ಬೆಣಚುಕಲ್ಲಿನ ಮೇಲೆ ಈರುಳ್ಳಿಯನ್ನು ಹಾಕುವುದರಿಂದ ಅದು ಎಣ್ಣೆ ಸಿಡಿಸಿದಂತೆಯೇ ಶಬ್ದ ಮಾಡುತ್ತದೆ. ಅದನ್ನು ಸಾರಿನ ಮಡಕೆಗೆ ಅದ್ದುವುದು ಇಂದಿಗೂ ಪ್ರಚಲಿತದಲ್ಲಿರುವ ಒಂದು ಅಡುಗೆ ಪದ್ಧತಿ.

ಬೇಯಿಸಿದ ಹುರುಳಿಕಾಳು–ಮಜ್ಜಿಗೆಯೂ ಊಟದ ಒಂದಂಶವಾಗಿದ್ದವು. ಧೂಪದ ಚನ್ನೇಗೌಡರ ಮನೆ ಅರವಟ್ಟಿಗೆಯಾಗಿದ್ದಾಗ, ದೊಡ್ಡ ದೊಡ್ಡ ಗುಡಾಣಗಳಲ್ಲಿ ಅಂಬಲಿಯನ್ನೂ ನೀರುಮಜ್ಜಿಗೆಯನ್ನೂ ಇಡಿಸಿ ಬಾಯಾರಿ ಬಂದವರಿಗೆಲ್ಲ ಒಂದು ಮೊಗೆ ಅಂಬಲಿ ಕೊಟ್ಟು ಬೇಯಿಸಿದ ಹುರುಳಿಕಾಳನ್ನು ದೊನ್ನೆಯಲ್ಲಿ ಕೊಡಿಸುತ್ತಿದ್ದರು.[೧] ಅಂಬಲಿ ಕುಡಿದು ತಿಂದಾದ ಮೇಲೆ ಒಂದು ಮೊಗೆ ನೀರುಮಜ್ಜಿಗೆ ಕೊಡಿಸುವರು.

ಮುದ್ದೆ ಊಟಮಾಡುವಾಗ '**ಒತ್ತಿನಚಕ್ಕೆ**'ಯನ್ನು ಬಳಸಲಾಗುತ್ತದೆ. ಗಂಗಳದ ಕೆಳಗೆ ಒಂದು ಮರದ ಸಣ್ಣ ಚಕ್ಕೆಯನ್ನಿಟ್ಟು ಮುದ್ದೆಯೊಂದಿಗೆ ಸೊಪ್ಪು ಅಥವಾ ಕಾಳು ಬೇರೆಯದಿರಲೆಂದು ಹಾಗೆ ಮಾಡುತ್ತಾರೆ. ಈ ಮರದ ಚಕ್ಕೆ **ಒತ್ತಿನ ಚಕ್ಕೆ** ಎಂದು ಇವತ್ತಿಗೂ ರೂಢಿಯಲ್ಲಿದೆ.

**'ಅಂಬಲಿ ತುಂಬೆಸೊಪ್ಪು'** ಎಂಬುದು ಕಡುಬಸವರ ಆಹಾರವಾಗಿ ಪ್ರಚಲಿತ 'ನುಡಿಗಟ್ಟೇ' ಆಗಿದೆ.

---

೧. ಸೊನ್ನೆಯಿಂದ ಸೊನ್ನೆಗೆ, ಪು. ೧೬೨

ಬಯಲುಸೀಮೆಯ ವಿಶೇಷವಾದ ಮತ್ತೊಂದು ಅಡುಗೆ ಮಾಂಸಾಹಾರ. ಕೋಳಿಸಾರು, ಅದಕ್ಕೆ ಮುದ್ದೆ. ಕೋಳಿಸಾರಿನ ಊಟವಾದ ಮೇಲೆ ಬಿಸಿಬಿಸಿ ಸಾರಿಗೆ ತುಪ್ಪ ಬಿಡಿಸಿಕೊಂಡು ಕುಡಿಯುವುದು ವಾಡಿಕೆಯಾಗಿದೆ. ಇಂತಹ ಕೋಳಿಸಾರಿಗೇ ಕಾದಂಬರಿ ನಾಯಕ ಮನಸೋತಿದ್ದು. ಕೋಳಿಸಾರು ಎಂದರೆ ಇಡೀ ಸಾಲವನ್ನೇ ಮನ್ನಾ ಮಾಡಿಬುಡುವಂತಹವನು. "ಮೂಡ್ಲಗಿರಿಗೌಡನ ಮನೆಯ ಕೋಳಿಸಾರೆಂದರೆ ಇಡೀ ಸಾಲವನ್ನೇ ಅದಕ್ಕಾಗಿಬಿಟ್ಟರೂ ಚಿಂತೆಯಿರಲಿಲ್ಲ. ಅವನ ಹೆಂಡತಿ ಕೋಳೀಸಾರು ಮಾಡಿದಳೆಂದರೆ ಆ ಊರಿನ ಶಿವಾಚಾರದವರೆಲ್ಲ 'ಈ ಲಿಂಗ ಕಟ್ಟಿಕೊಂಡು ಎಂಥ ಎಡವಟ್ಟು ಕೆಲಸ ಮಾಡಿಕೊಂಡು ಬುಟ್ವೊ' ಎಂದು ಅಂದುಕೊಳ್ಳುವಂತೆ ಮಾಡುತ್ತಿತ್ತು."[೧]

ಹುರಿದಕ್ಕಿ ಗಂಜಿಯನ್ನು ಹುಷಾರು ತಪ್ಪಿದವರಿಗೆ ಮಾಡಿಕೊಡುವ ಪರಿಪಾಠ-ವಿದ್ದುದನ್ನು ಕಾಣಬಹುದು. ಮೈಸೂರಿನಿಂದ ಬರುವಾಗ ವಾಂತಿಭೇದಿಯೆಂದು ಬಂದ ಚನ್ನನಿಗೆ ಅವನ ಹೆಂಡತಿ ಚೌಡಿ ಹುರಿದಕ್ಕಿ ಗಂಜಿಯನ್ನು ಮಾಡಿಕೊಡುತ್ತಿದ್ದಳು.[೨]

ಊಟಕ್ಕೆ ಮೊದಲು ಕೈಕಾಲು ತೊಳೆದು ಕೂರುವ ನಿಯಮವಿಟ್ಟುಕೊಂಡಿದ್ದ ಗ್ರಾಮ್ಯರು ಎಷ್ಟೇ ಹಸಿದಿದ್ದರೂ ದೇವರನ್ನು ನೆನೆಯುವುದನ್ನು ಮರೆತವರಲ್ಲ. "ಕಾಲು ತೋಳಿದೆ ನೀರು ಕುಡಿಯೋನ್ನ, ತಿಕ್ಕೆ ಮಣಿಲ್ದೆ ಹಿಟ್ಟುಣ್ಣೋನ್ನ, ಹಣೆಗೆ ಈಭೂತಿ ಇಕ್ಕೊಳ್ದೆ ಹಿಟ್ಟಿನ ಮುದ್ದೆ ಮ್ಯಾಲೆ ಕೈ ಮಡಗೋನ್ನ ಜೀವನದಲ್ಲಿ ಯಾವತ್ತೂ ತವಕ ತಪ್ಪಿದ್ದಲ್ಲ" ಎಂಬ ಎಚ್ಚರಿಕೆಯ ಮಾತುಗಳು ಜನಪದರ ಅಲಿಖಿತ ಶಾಸನಗಳಾಗಿದ್ದವು. ಆಧುನಿಕ ಬದುಕಿನ ಸೌಲಭ್ಯ ಮತ್ತು ನಾಗರಿಕ ಜೀವನದ ಪ್ರೇರಣೆಯಿಂದ ಅದೆಷ್ಟೋ ಅಡುಗೆಗಳು, ಆಹಾರ ಪದ್ಧತಿಗಳು ಮರೆಯಾಗಿವೆ. ಅಡುಗೆ ಮಾಡುವುದೂ ಒಂದು ವಿಶಿಷ್ಟ ಕಲೆಯಾಗಿದ್ದು, ಈ ಜನಪದರ ಅಡುಗೆಗಳನ್ನು ಆಯಾಯ ಪ್ರದೇಶದ ಜನಪದ ವಿದ್ವಾಂಸರು, ಸಂಗ್ರಹಕಾರರು, ತುರ್ತಾಗಿ ಕ್ರೋಢೀಕರಿಸಿದಲ್ಲಿ ಜಾನಪದ ಮಹತ್ತನ್ನು ಉಳಿಸಿದಂತಾಗುತ್ತದೆ. ಎಣ್ಣೆಯ ಬಳಕೆಯಿಲ್ಲದೆ ಮಾಡುವ ಅನೇಕ ಪದಾರ್ಥಗಳು ದೇಹಾರೋಗ್ಯವನ್ನು ಕಾಪಾಡುವಲ್ಲಿ ಸಹಕಾರಿಯಾಗುತ್ತವೆ. ಮುಂದಿನ ತಲೆಮಾರಿಗೂ ಅದನ್ನು ಉಳಿಸಿದಂತಾಗುತ್ತದೆ. ಇದು ದೇಸೀ ಸಂಪತ್ತಾಗಿದ್ದು ತನ್ನ ಸರಳತೆಯಿಂದಲೇ ಶ್ರೀಮಂತವಾಗಿದೆ.

### ೫.೨. ಉಡುಗೆ-ತೊಡುಗೆ

ಆಧುನಿಕ ಸಂಪರ್ಕ-ಸಾಧನಗಳು ಸಹಜವಾಗಿ ಕೈಗೆಟಕುವ ಇಂದಿನ ದಿನಗಳಲ್ಲಿಯೂ ಮಲೆನಾಡು, ಕರಾವಳಿ, ಬಯಲು ಪ್ರದೇಶಗಳ ಜನತೆಯ ಉಡುಗೆ-ತೊಡುಗೆ, ಆಹಾರ-ವಿಹಾರಗಳಲ್ಲಿ ಸಾಕಷ್ಟು ವ್ಯತ್ಯಾಸವಿರುವುದನ್ನು ಗುರುತಿಸಬಹುದು. ಕಾದಂಬರಿಯಲ್ಲಿ ಲೇಖಕರು

---

೧. ಸೊನ್ನೆಯಿಂದ ಸೊನ್ನೆಗೆ, ಪು. ೧೯೧

೨. ಅದೇ, ಪು. ೧೨೮

ಬಯಲು ಸೀಮೆಯ ಸಾಮಾಜಿಕ ಬದುಕನ್ನು ಚಿತ್ರಿಸುತ್ತಾ ಅಂದಿನ ವೇಷಭೂಷಣಗಳ ವಿವರಗಳನ್ನು ಕೊಡುತ್ತಾರೆ. ಆಯಾಯ ಪ್ರದೇಶದ ಉಡುಗೆಗಳು ಅಲ್ಲಿನ ಪರಿಸರವನ್ನು ಅವಲಂಬಿಸಿವೆ. ಅಲ್ಲದೆ ಅಂದಿನ ಸಮಾಜದ ಸ್ಥಿತ್ಯಂತರವನ್ನೂ ದಾಖಲಿಸುತ್ತವೆ.

ಹಿಂದಿನವರು ಪಂಚೆ ಅಥವಾ ದಟ್ಟಿಯನ್ನು ಸುತ್ತದೆ ಕಚ್ಚೆ ಪಂಚೆ ಹಾಕುತ್ತಿದ್ದರು. ದಟ್ಟಿ ಸುತ್ತುವುದು ಶಾಸ್ತ್ರ ಸಮ್ಮತವಲ್ಲ ಎಂಬ ಕಾರಣಕ್ಕೆ ಅವರು ಹಾಗೆ ಮಾಡುತ್ತಿದ್ದುದು.[೧] ಗದ್ದೆಗಳಲ್ಲಿ ಕೆಲಸ ಮಾಡುವಾಗ ಅಥವಾ ಬಹಳ ಶೆಖೆ ಇದ್ದರೆ ಅದನ್ನೂ ಬಿಚ್ಚಿ ಹಾಕಿ ಬರಿ ಕಚ್ಚೆ ಪಾವಡೆಯಲ್ಲೇ ಇರುತ್ತಿದ್ದರು. ಹೊಲೆದ ಬಟ್ಟೆಯನ್ನು ಗಂಡಸರಾಗಲೀ ಅವರ ಹೆಂಡತಿಯರಾಗಲೀ ಅಷ್ಟೇ ಏಕೆ ವಯಸ್ಸಾದವರ್‍ಯಾರೂ ಮೈಮೇಲೆ ಹಾಕುತ್ತಿರಲಿಲ್ಲ. ಅದು ಶಾಸ್ತ್ರ ನಿಷೇಧವಾಗಿತ್ತು. ಹೆಂಗಸರು ರವಿಕೆಯನ್ನು ತೊಡುತ್ತಿರಲಿಲ್ಲ ಎಂಬ ಉಲ್ಲೇಖನವನ್ನು ಗಮನಿಸಿದರೆ ಹೊಲೆದ ಬಟ್ಟೆ ಇತ್ತೀಚಿನದು ಎಂದು ವೇದ್ಯವಾಗುತ್ತದೆ. ಬಟ್ಟೆಯನ್ನು ಹೊಲೆಯಬೇಕಾದರೆ ಕೈಯಿಂದಲೇ ಮಾಡಿಕೊಳ್ಳುತ್ತಿದ್ದರು. ಶಿವಾಚಾರದವರಿಗೂ ಒಕ್ಕಲಿಗರಿಗೂ ಯಾವುದೇ ವ್ಯತ್ಯಾಸವಿರಲಿಲ್ಲ. ಅವರು ಬೇಸಾಯಗಾರರಾಗಿದ್ದುದರಿಂದ ಇತರರಂತೆ ಹಾಸುವುದು, ಹೊದೆಯುತ್ತಿದ್ದುದು ಕುರಿಕಂಬಳಿಯನ್ನು. ಶಿವಾಚಾರದವರಾದ ಗುರುಸಿದ್ದಯ್ಯನವರ ಮೈಮೇಲೆ ಕಡಿಮೆಬಟ್ಟೆಯಿರುತ್ತಿತ್ತು ಎಂದು ಉಡುಗೆ ಸಂಬಂಧದ ಮಾಹಿತಿಗಳು ಗರಿಬಿಚ್ಚಿಕೊಂಡಿವೆ.

ಪಟೇಲರ ತೆಂಡೆಯ ಜನ ಕಚ್ಚೆಯನ್ನು ಸ್ವಲ್ಪ ಉದ್ದವಾಗಿ ಬಿಡುತ್ತಿದ್ದುದು,[೨] ಚನ್ನನ್ನು ತನ್ನ ಹೆಂಡತಿ ಚೌಡಿಯನ್ನು ಮೈಸೂರಿಗೆ ಕರೆದುಕೊಂಡು ಹೋಗಿ ಸೀರೆ-ರವಿಕೆ ಕೊಡಿಸುವುದು ಮಹತ್ವದ ಸಂಗತಿಯಾಗಿದೆ. ಹಾಗೆಯೇ ಚನ್ನೇಗೌಡರು ಬಿಳಿಯ ಕಚ್ಚೆ ಪಂಚೆ, ಮೇಲೆ ರೇಷ್ಮೆ ವಸ್ತ್ರ, ಕಾಲಿಗೆ ಚಡಾವು, ಹೆಗಲ ಮೇಲೆ ಕೆಂಪು ಹಸಬೆ ಚೀಲ, ತಲೆಗೆ ಪಾಗು ಸುತ್ತಿ ಸಾಲ ವಸೂಲಿಗೆ ಹೊರಡುತ್ತಿದ್ದುದು. ಅಂದಿನ ಕಾಲದ ಹಣವಿದ್ದವರ ಉಡುಗೆಯ ವೈಖರಿಗೆ ಸಾಕ್ಷಿಯಾಗಿದೆ. ಇದು ಅವರ ಗತ್ತನ್ನು ಸೂಚಿಸುತ್ತಿತ್ತು.

ಅಂದಿನ ಜನರ ಉಡುಗೆ-ತೊಡುಗೆಗಳು ಸರಳವಾಗಿದ್ದವು. ಹಣವುಳ್ಳವರೂ ಬಾಹ್ಯ ಅಲಂಕಾರಕ್ಕೆ ಬೆಲೆಕೊಡುತ್ತಿರಲಿಲ್ಲ. ಬೆಳ್ಳಿ ಒಡವೆಗಳನ್ನೇ ಹಾಕಿಕೊಳ್ಳದ, ಚಿನ್ನದ ಒಡವೆಗಳನ್ನು ಕಣ್ಣಿಂದಲೂ ನೋಡದವರಿದ್ದರು. ಕರಿಮಣಿ ತಾಳಿ, ಕಿವಿಗೆ ಓಲೆ ಅಷ್ಟೇ ಧರಿಸುತ್ತಿದ್ದುದು ರೂಢಿಯಾಗಿತ್ತು. ಚೌಡಿ ಅನುಕೂಲಸ್ಥಳಾದರೂ ಆಭರಣಗಳನ್ನು ಕಣ್ಣಿಂದಲೇ ನೋಡಿ ಸುಮ್ಮನಾಗಬೇಕಾಗಿತ್ತು. ಚೌಡಮ್ಮಳಿಗೆ ಮದುವೆಯಾಗಿ ಬಂದಾಗ ಕೊರಳಲ್ಲಿದ್ದ ಒಂದು

---

೧. ಸೊನ್ನೆಯಿಂದ ಸೊನ್ನೆಗೆ, ಪು. ೨

೨. ಅದೇ, ಪು. ೯೮

ಕರೀಮಣಿಯ ಚಿನ್ನದ ತಾಲಿ ಮತ್ತು ಬೆಳ್ಳಿಯ ಕಡಗ, ಡಾಬುಗಳೇ ಅವಳ ಆಭರಣವಾಗಿದ್ದವು. ಒಡವೆಗಳಿಗಿಂತ ದನಕರು, ಭೂಮಿಯೇ ಅವರ ನಿಜವಾದ ಸಂಪತ್ತುಗಳಾಗಿದ್ದವು.

ಇಷ್ಟಾಗಿಯೂ ಕೃತಿಯಲ್ಲಿ ಅನೇಕ ಸಾಂಪ್ರದಾಯಿಕ ಆಭರಣಗಳ ಉಲ್ಲೇಖವಿದೆ. ಚನ್ನನಿಗೆ ಸಿಕ್ಕಿದ ವಡವೆ ಗಂಟಿನಲ್ಲಿ ಚಿನ್ನದ ಡಾಬು, ವಂಕಿ, ಅಡ್ಡಿಕೆ, ಜೋಮಾಲೆ, ನಾಗರು, ಕೆನ್ನೆ ಸರಪಣಿ, ಕಾಸಿನಸರ, ಕಂಠೀಹಾರ, ವೈಜಯಂತಿಮಾಲೆ, ಗೋಣಸು... ಇತ್ಯಾದಿ ಆಭರಣಗಳಿದ್ದವು ಎಂದು ಹೇಳುವಲ್ಲಿ ಈ ಕೃತಿ ಪರಿಪರಿ ಒಡವೆಗಳ ಮಾಹಿತಿ ನೀಡಿ ಸಾಂಪ್ರದಾಯಿಕ ಹಾಗೂ ಐತಿಹಾಸಿಕತೆಯತ್ತ ನಮ್ಮ ದೃಷ್ಟಿಯನ್ನು ಸೆಳೆಯುತ್ತದೆ.

**೫.೩. ಕೃಷಿಪದ್ಧತಿ**

ನಾಗೇಗೌಡರು ಮಣ್ಣಿನ ಮಗನಾಗಿ ಬೆಳೆದು ಬಂದವರು. ಶೂದ್ರ ಜೀವನದಲ್ಲಿ ಚೆನ್ನಾಗಿ ಬದುಕಿ ಅದರಿಂದ ಸಾಕಷ್ಟು ಅನುಭವವನ್ನು ಪಡೆದವರು. ಕೃಷಿಕ ಕುಟುಂಬದಿಂದ ಬಂದ ಲೇಖಕರು ವ್ಯವಸಾಯ ಸಂಬಂಧಿತ ಅನೇಕ ವಿವರಗಳನ್ನು ತಮ್ಮ ಕೃತಿಯಲ್ಲಿ ಪಡಿಮೂಡಿಸಿದ್ದಾರೆ. ಗ್ರಾಮಜೀವನವನ್ನು ಚಿತ್ರಿಸುವಾಗ ಅನಿವಾರ್ಯವಾಗಿ ಅದರ ಭಾಗವಾಗಿ ಬರುವ ಬೇಸಾಯ, ಬೇಸಾಯಗಾರರ ಬದುಕನ್ನು ಯಥಾವತ್ತಾಗಿ ಕಣ್ಣಮುಂದೆ ನಿಲ್ಲಿಸುತ್ತಾರೆ. ಇದು ಇವರ ಬರವಣಿಗೆಯ ವೈಶಿಷ್ಟ್ಯವೂ ಹೌದು. ಹಳ್ಳಿಯ ಬದುಕನ್ನು ಸೂಕ್ಷ್ಮವಾಗಿ ಅವಲೋಕಿಸಿ ತಮ್ಮ ಸಾಹಿತ್ಯದಲ್ಲಿ ಸಮಯೋಚಿತವಾಗಿ ಬಳಸಿರುವುದನ್ನು ಇವರ ಕೃತಿಗಳಲ್ಲಿ ಗುರುತಿಸಬಹುದು.

**ಹೊನ್ನೇರು–** ಮೈಸೂರು ಕಡೆ ಭೂಮಿ ಪೂಜೆಯನ್ನು ಹೊನ್ನಾರು ಎಂದು ಕರೆಯುತ್ತಾರೆ. ಆ ದಿನ ಭೂಮಿಯನ್ನು ಉಳುವುದಕ್ಕೆ ಮೊದಲುಮಾಡುತ್ತಾರೆ. ಇದನ್ನು ಉತ್ತರ ಕರ್ನಾಟಕದ ಬಹುತೇಕ ಪ್ರದೇಶಗಳಲ್ಲಿ ಯುಗಾದಿಯ ಪಾಡ್ಯದ ದಿನ ಆಚರಿಸುತ್ತಾರೆ. ಹೊನ್ನಾರು ಹಬ್ಬದ ಕ್ರಿಯಾಚರಣೆ ಸ್ಥೂಲವಾಗಿ ಈ ರೀತಿ ಇದೆ. ಜೋತಿಷಿಯಲ್ಲಿಗೆ ಹೋಗಿ ಯಾರ ಹೆಸರಿಗೆ ಬರುತ್ತದೆ ಎಂಬುದನ್ನು ಹೆಸರು ಬಲ ಕೇಳಿ ಆ ವ್ಯಕ್ತಿಯು ಜ್ಯೋತಿಷಿ ತಿಳಿಸಿದ ದಿಕ್ಕಿನಿಂದ ನೇಗಿಲು ಹೂಡಿ ೩ ಅಥವಾ ೫ ಸಾಲು ನೇಗಿಲು ಹೊಡೆಯುವುದು ಹೊನ್ನಾರು ಹಬ್ಬದ ವಾಡಿಕೆ. ಸೋಮವಾರ ರೈತರಿಗೆ ಬಿಡುವು. ಆರುಕಟ್ಟುವಂತಿಲ್ಲ. ಮಂಗಳವಾರ 'ಹೊನ್ನೇರು' ಕಟ್ಟುವಂತಿಲ್ಲ. ಹೊನ್ನೇರು ಸಂಪ್ರದಾಯ ಈಗಿನ ಕೃಷಿಯಲ್ಲಿ ಕಣ್ಮರೆಯಾಗುತ್ತದೆ. ಮುಂಗಾರು ಸಮಯದಲ್ಲಿ ಬರುವ ಯುಗಾದಿಯಂದು ಬೆರಳೆಣಿಕೆಯಷ್ಟು ಮಂದಿ ಸಾಂಪ್ರದಾಯಿಕವಾಗಿ 'ಹೊನ್ನೇರು' ಕಟ್ಟುವುದನ್ನು ಇಂದಿಗೂ ಕಾಣಬಹುದು.

ಸುಮಾರು ೧೫೦ ವರ್ಷದ ಹಿಂದಿನ ಮಂಡ್ಯ ಜಿಲ್ಲೆಯ ಚಿತ್ರಣವನ್ನು ಈ ಕೃತಿ ಕೊಡುತ್ತದೆ. ಪ್ರಮುಖ ಬೆಳೆಗಳಾಗಿ ರಾಗಿ, ಅವರೆ, ಹುರುಳಿ, ಹುಚ್ಚೆಳ್ಳು ಬೆಳೆಯುತ್ತಿದ್ದ ಕಾಲ. ಇವೆಲ್ಲ ಮಳೆಯಾಶ್ರಿತ ಬೆಳೆಗಳು. ಮಂಡ್ಯ ಜಿಲ್ಲೆಯ ಇಂದಿನ ನೀರಾವರಿಗೆ ಕಾರಣವಾದ

ಕನ್ನಂಬಾಡಿ ಕಟ್ಟೆ ಕಟ್ಟುವುದಕ್ಕಿಂತ ಹತ್ತಾರು ವರ್ಷಗಳ ಹಿಂದಿನ ಚಿತ್ರಣವನ್ನು ಕೃತಿ ಕಟ್ಟಿಕೊಡುತ್ತದೆ.

**ಕರ್ಲುಗದ್ದೆ–** ಕರ್ಲು ಜಮೀನು ಕೃಷಿಗೆ ಯೋಗ್ಯವಾದುದಲ್ಲ. ಆದರೆ ಕೃತಿಯಲ್ಲಿ ಕರ್ಲುಗದ್ದೆಯಲ್ಲಿ ಮಲ್ಲೇಗೌಡರ ಭತ್ತದ ಬೆಳೆ ಮತ್ತು ತೆಂಗಿನ ಸಸಿಗಳಿದ್ದವು ಎಂಬ ವಿಚಾರವಿದೆ. ಇಂತಹ ಸ್ಥಳದಲ್ಲಿ ಕೃಷಿ ಮಾಡಬೇಕಾದರೆ ಅದಕ್ಕೆ ಬೇರೆ ಕಡೆಯಿಂದ ಸಾಕಷ್ಟು ಮಣ್ಣನ್ನು ತಂದು ಕೃಷಿ ಯೋಗ್ಯವಾಗಿ ಪರಿವರ್ತಿಸಿಕೊಳ್ಳಬೇಕು. ಅಂತಹ ಚಾಕಚಕ್ಯತೆ ಮೈಲಾರದ ರೈತರದ್ದಾಗಿತ್ತು.

ಬೇಸಾಯಕ್ಕೆ ಎಷ್ಟು ಜನರಿದ್ದರೂ ಸಾಲದು. ಮನೆಮಂದಿ ಎಲ್ಲ ಗದ್ದೆಯಲ್ಲಿ ನಿಂತರೂ ಇನ್ನಷ್ಟು ಆಳುಗಳನ್ನು ಬೇಡುತ್ತದೆ. 'ವ್ಯವಸಾಯ– ಮನೆಯಮಂದಿಯೆಲ್ಲ ಸಾಯ' ಎಂಬ ಮಾತು ಈ ಹಿನ್ನೆಲೆಯಲ್ಲಿ ಬಂದಿರುವುದನ್ನು ಕಾಣಬಹುದು. ಹೀಗಿರುವಲ್ಲಿ ಬೇಸಾಯಗಾರರು ಪರಸ್ಪರ ನೆರವಾಗುವುದನ್ನು ಗ್ರಾಮ್ಯರಲ್ಲಿ ಕಾಣುತ್ತೇವೆ. ಇದಕ್ಕೆ 'ಮುಯ್ಯಾಳು' ಎಂದು ಕರೆಯುತ್ತಾರೆ. ಕೃತಿಯಲ್ಲಿ ಮಲ್ಲೇಗೌಡರು ಸ್ವಲ್ಪ ಹೆಚ್ಚೆ ಅನ್ನುವಷ್ಟು ಉದಾರ ಹಸ್ತರಾಗಿದ್ದರು. ಅವರಿವರ ಹೊಲಕ್ಕೆ ರಾಗಿ–ಅವರೆ ಬಿತ್ತುಕೊಡೋದು, ಹೊಲ ಹರಗಿ ಕೊಡೋದು ಮೊದಲಾದ ಕೆಲಸಗಳಿಂದ ಸಹಬಾಳ್ವೆಗೆ ಹೆಸರಾಗಿದ್ದರು.[೧]

ರೈತರಿಗೆ ಎತ್ತುಗಳಷ್ಟು ಪ್ರಿಯವಾದ ಪ್ರಾಣಿ ಇನ್ನೊಂದಿರಲಾರದು. 'ಎತ್ತಿಲ್ಲದ ಬೇಸಾಯ ಅಸಾಧ್ಯ' ಎಂಬಂತಹ ಕಾಲವಿತ್ತು. ಕೃಷಿಕರಿಗೆ ಎತ್ತುಗಳೇ ಆಧಾರವಾಗಿದ್ದುರಿಂದ ಅವುಗಳ ಆರೈಕೆಯನ್ನು ವಿಶೇಷವಾಗಿ ಮಾಡುತ್ತಿದ್ದರು. ಪ್ರಸ್ತುತ ಕೃತಿಯಲ್ಲಿ ಎತ್ತುಗಳ ಉಪಚಾರದ ರೀತಿಯನ್ನು ಕಾಣಬಹುದು. ದನಗಳಿಗೆ ಅವರವರ ಹೊಲದ ಬದುವಿನಲ್ಲೊ, ದೇವರ ಮನೆಯ ಮುಂದೋ ಸೋಗು ಹೊದಿಸಿ ಮಾಡಿದ ನೆರಳಿನಲ್ಲಿ ಕುಳಿತು ಎಳೆ ಹುಚ್ಚೆಳ್ಳು ಸೊಪ್ಪು, ಜೋಳದ ಕಡ್ಡಿ, ಅವರೆಕುಡಿ ತಿನ್ನಿಸುತ್ತಿದ್ದರು. ಆ ಸಮಯದಲ್ಲಿ ಒಬ್ಬರಿಗೊಬ್ಬರು ಲೋಕಾಭಿರಾಮವಾಗಿ ಹರಟುವುದು ಸಾಮಾನ್ಯವಾಗಿ ಕಾಣುವ ದೃಶ್ಯವಾಗಿತ್ತು.[೨] ಅಲ್ಲದೆ ಎತ್ತುಗಳಿಗೆ ಹುರುಳಿ ಆಡಿಸಿ ಅದರ ಹಾಲನ್ನು ಕುಡಿಸುತ್ತಿದ್ದರು. ತಮ್ಮ ಬದುಕಿನ ಆಧಾರಸ್ತಂಭಗಳಾಗಿದ್ದ ಪ್ರಾಣಿಗಳ ಅದರಲ್ಲೂ ಎತ್ತುಗಳ ಬಗೆಗೆ ಪ್ರೀತಿಯಷ್ಟೇ ಅಲ್ಲ ಭಕ್ತಿಯೂ ಇತ್ತು. ಹಸುಗಳನ್ನು 'ಗೋಮಾತೆ' ಎಂದು ಪೂಜಿಸುವ ರೂಢಿ ಇಂದಿಗೂ ಇದೆ.

**ಕೀರೆಮಡಿ:** "ಚನ್ನ ಮೊಟ್ಟಮೊದಲಿಗೆ ಬೋರೆಹೊಲ ಉತ್ತು ಕೀರೆಮಡಿ ಮಾಡಿದ ಹಾಗೆ ಹಸನುಮಾಡಿದ" ಎಂಬಲ್ಲಿ 'ಕೀರೆಮಡಿಯ' ವಿಶೇಷತೆಯನ್ನು ಗುರುತಿಸಬಹುದು. ರೈತರು ಕೀರೆಸೊಪ್ಪು ಬೆಳೆಯಲು ಭೂಮಿಯನ್ನು ಕಲ್ಲುಗಳಿಲ್ಲದಂತೆ ಚನ್ನಾಗಿ ಹಸನುಮಾಡಿ ಸಾಧಾರಣ ಮಟ್ಟಕ್ಕಿಂತ ತುಸು ಎತ್ತರ ಮಾಡಿ, ಕಟ್ಟೆ ಕಟ್ಟಿ ಸಣ್ಣಸಣ್ಣ ಪಾತಿಮಾಡಿಕೊಂಡು ಕೀರೆ, ದಂಟು

---

೧. ಸೊನ್ನೆಯಿಂದ ಸೊನ್ನೆಗೆ, ಪು. ೮೩

೨. ಸೊನ್ನೆಯಿಂದ ಸೊನ್ನೆಗೆ, ಪು. ೮೯

ಮೊದಲಾದ ಸೊಪ್ಪಿನ ಬೀಜ ಬಿತ್ತುವ ಅಭ್ಯಾಸವಿದೆ. ಇದನ್ನೆ ಕೀರೆಮಡಿ ಎನ್ನುತ್ತಾರೆ. ಇದು ಅಚ್ಚುಕಟ್ಟಿಗೆ ಹೆಸರಾದುದು ಕೂಡ ಆಗಿದೆ.

**ಮೇಟಿ**[೧] **ನೆಡುವುದು–** ಧಾನ್ಯ ಒಕ್ಕಣೆಗಾಗಿ ಭೂಮಿಯನ್ನು ಗುಡಿಸಿ, ಸಗಣಿಯಿಂದ ತಾರಿಸಿ ಕಣಮಾಡಿ[೨] ಮಧ್ಯದಲ್ಲಿ ಮೇಟಿ ನೆಟ್ಟು ದೇವರ ಪೂಜೆ ಮಾಡುವ ಸಂಪ್ರದಾಯವಿತ್ತು. ಧಾನ್ಯದ ಮೊದಲ ಹೊರೆಯನ್ನು ದೇವರಿಗೆ ಒಪ್ಪಿಸುತ್ತಿದ್ದರು. ಅದನ್ನು 'ದ್ಯಾವರಗೊಳಗ' ಎಂದು ಕರೆಯಲಾಗುತ್ತಿತ್ತು. ನಾಲ್ಕು ಕೊಳಗಧಾನ್ಯವನ್ನು ಬೆಳೆದರೂ ಅರ್ಧಕೊಳಗವನ್ನಾದರೂ ದೇವರಿಗೆ ಅರ್ಪಿಸುವ ಸಂಪ್ರದಾಯವಿತ್ತು.[೩] ಮನೆದೇವರಿಗೆ ಮೀಸಲಿಡುವ ಈ ಪದ್ಧತಿಯಲ್ಲಿ ಕೆಲವು ವೇಳೆ ಊರಿನ ಗುರುಗಳಿಗೋ ಅಥವಾ ಮನೆದೇವರ ಅರ್ಚಕರಿಗೋ ಸಲ್ಲಿಸುವ ರೂಢಿಯೂ ಇದೆ.

'ಕಣ ಮಾಡು'ವ ಪ್ರಕ್ರಿಯೆ ಇಂದು ಮರೆಯಾಗುತ್ತಿದೆ. ಒಕ್ಕಣೆ ಕೆಲಸವನ್ನು ಯಂತ್ರಗಳೇ ನಿಭಾಯಿಸುತ್ತಿವೆ. ಇನ್ನು ಕೆಲವು ವೇಳೆ ಕಣ ಮಾಡುವುದನ್ನು ಬಿಟ್ಟು ಡಾಂಬರು ರಸ್ತೆಗಳ ಮೇಲೆ ಹುಲ್ಲು ಹಾಕಿಕೊಂಡು, ಹೋಗುವ ಬರುವ ವಾಹನಗಳನ್ನು ಒಕ್ಕಣೆಗಾಗಿ ಕಾಯುತ್ತಾ ಕೂರುವುದನ್ನು ಕಾಣಬಹುದು.

ಕಾದಂಬರಿಯಲ್ಲಿ ಬರುವ ರೈತರ ಬಾಳಿನ 'ಗೀತೋಪದೇಶ' ಎಂಬ ಭಾಗ ಬೇಸಾಯ ಹಾಗೂ ದನಕರು ಇರುವವರಿಗೆ ಒಂದು ಕೈಪಿಡಿಯಂತಿದೆ. ಮಲ್ಲೇಗೌಡರು ಚನ್ನನಿಗೆ ತಮ್ಮ ಮನೆಗೆಲಸದ ಹುಡುಗಿ ತಂಟ್ರದಲೆ ಚೌಡಿಯನ್ನು ಮದುವೆ ಮಾಡಿಕೊಟ್ಟಾಗ ಬೇಸಾಯ ಮತ್ತು ದನಸಾಕುವ ವಿಚಾರಗಳನ್ನು ಮನದಟ್ಟಾಗುವಂತೆ ವಿವರಿಸುತ್ತಾರೆ. ಅರ್ಜುನನಿಗೆ ಶ್ರೀಕೃಷ್ಣ ಉಪದೇಶಿಸಿದ ಗೀತೋಪದೇಶದಂತಿದೆ ಇದು. ಒಂದೆಡೆ ಸೇರಿಕೊಂಡಿರುವ ಈ ಜಾನಪದೀಯ

---

೧. **ಮೇಟಿ –** ಎಂದರೆ ಬಿದಿರು ಇಲ್ಲವೆ ಬೇರೆ ಯಾವುದಾದರೂ ಮರದ ತುಂಡು. ಸುಮಾರು ೫ರಿಂದ ೬ ಅಡಿ ಎತ್ತರದ ಈ ಮರ (ಮೇಟಿಮರ) ಬಿಗಿಯಾಗಿ, ನೇರವಾಗಿರಬೇಕು. ಇದನ್ನು ಕಣದ ಮಧ್ಯದಲ್ಲಿ ನೆಟ್ಟು ಅದಕ್ಕೆ ಹಗ್ಗದ ಸಹಾಯದಿಂದ ಏಳೆಂಟು ರಾಸುಗಳನ್ನು ಕಟ್ಟಿ ಕಣದಲ್ಲಿ ಹಾಸಿರುವ (ಒದರಿರುವ) ರಾಗಿ, ಅವರೆ, ಹುರುಳಿ ಮೊದಲಾದವುಗಳ ತೆನೆಯ ಮೇಲೆ ಸುತ್ತಿಸುತ್ತಾರೆ. ಹೀಗೆ ಸುತ್ತುವುದರಿಂದ ತೆನೆಯೊಡೆದು ಧಾನ್ಯ ಹೊರಬರುತ್ತದೆ. ಅಷ್ಟೊಂದು ರಾಸುಗಳು ಒಟ್ಟಾಗಿ ಸುತ್ತುವಾಗ ಜಗ್ಗಿದರೂ ಕಿತ್ತುಬಾರದಂತೆ, ಮುರಿಯದಂತೆ ಮೇಟಿ ಭದ್ರವಾಗಿರಬೇಕು. ಮನೆಯ ಯಜಮಾನನ್ನು ಹಳ್ಳಿಯ ಕಡೆಗಳಲ್ಲಿ ಮೇಟಿಗೆ ಹೋಲಿಸುತ್ತಾರೆ. ಹಾಗೆಂದೇ 'ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಮೇಲು' ಎಂಬ ಗಾದೆ ಜನಜನಿತವಾಗಿದೆ. ಇಲ್ಲಿ ಮೇಟಿ ಎಂದರೆ 'ಹಿಡಿದು ಆಳುವುದು' – ಯಜಮಾನಿಕೆಯ ಗಟ್ಟಿತನವನ್ನು ಸೂಚಿಸುತ್ತದೆ.

೨. **ಕಣಮಾಡುವುದು** – ಎಂದರೆ ಕುಯ್ದ ಫಸಲನ್ನು ಹಸನುಮಾಡಿಕೊಳ್ಳುವ ಕಾರ್ಯಕ್ಕೆ ಭೂಮಿಯನ್ನು ಹುಲ್ಲು, ಮುಳ್ಳು ಇಲ್ಲದಂತೆ ಕೆತ್ತಿ ಸ್ವಚ್ಛಮಾಡುತ್ತಾರೆ. ಬಳಿಕ ಸಗಣಿಯಿಂದ ತಾರಿಸಿ ಶುಚಿಗೊಳಿಸಿದ ಮೇಲೆ ಹೂವಿನಿಂದ ಪೂಜಿಸಿ ಒಕ್ಕಣೆ ಕಾರ್ಯಕ್ಕೆ ಆ ಸ್ಥಳವನ್ನು ಉಪಯೋಗಿಸುತ್ತಾರೆ. ನೀನೇ ಕಣ ಮಾಡು ಮೇಟಿ ನೆಡು" ಸೊನ್ನೆಯಿಂದ... (೮೯)

೩. ಸೊನ್ನೆಯಿಂದ ಸೊನ್ನೆಗೆ, ಪುಟ. ೮೯

ಆಚಾರ-ವಿಚಾರಗಳು ಎದ್ದು ಕಾಣುವ ಅಂಶಗಳಾಗಿವೆ. ಹಿಂದಿನ ರೈತನಿಗೆ ಇವು ಸರ್ವೇಸಾಮಾನ್ಯವಾಗಿದ್ದರೂ ಇಂದು ಮರೆಯಾಗುತ್ತಿವೆ.

ರೈತನ ವ್ಯವಸಾಯದ ಬದುಕಿಗೆ ಸಾಧನ ಸಾಮಗ್ರಗಳು ಅತ್ಯಗತ್ಯ. ಉಳಲು ಎತ್ತು, ನೇಗಿಲು, ಹರಗಲು ಕುಂಟೆ, ಬಿತ್ತಲು ಕೂರಿಗೆ, ಸಾಲು ಮುಚ್ಚಲು ಕೊರಡು, ನೊಗ.... ಹೀಗೆ ಅವನ ಸಲಕರಣೆಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಇವುಗಳ ಅಗತ್ಯ ಎಷ್ಟೆಂಬುದನ್ನು ಮನದಟ್ಟು ಮಾಡಲು 'ಹತಾರ ಇಲ್ಲದವನು ಹೊತಾರೆ ಬಾ', 'ಮುಟ್ಟು ಇಲ್ಲಾಂತ ಮೂರು ಮನೆಗೆ ಹೋದರೆ ಕೆಟ್ಟಿತವನ ಒಕ್ಕಲುತನ' ಎಂಬ ಗಾದೆಗಳು ಸೃಷ್ಟಿಯಾಗಿವೆ.

"ಎತ್ತು ಬಂದ ತಕ್ಷಣ ಕಟ್ಟಾಕಬೇಕು.... ಮೂಗುದಾರ ದಿವಸಕೆ ನಾಕುಸಲ ತಿರುಗಿಸಬೇಕು.... ಇಲ್ಲದೇ ಹೋದರೆ ಕೊಳೀತದೆ.... ಬೆಳಗ್ಗೆ ಎದ್ದು ಎತ್ತಿನ ಹೊಟ್ಟೆ ನೋಡಬೇಕು... ಒಂದು ಕ್ಯಾರೆಹಾವ ಬಡದು ಸುತ್ತಿ ಎತ್ತಿನ ಅಂಗಳದಲ್ಲಿ ಇಟ್ಟಿರಬೇಕು... ಎತ್ತಿಗೆ ಏನಾರ ಅಜೀರ್ಣ ಮುಂತಾದ್ದು ಆದರೆ ಈರುಳ್ಳಿ, ಮೆಣಸು, ಬೆಳ್ಳುಳ್ಳಿ, ಅರಿಶಿನ, ಕೊತ್ತಂಬರಿ-ಇವನ್ನೆಲ್ಲಾ ಹಾಕಿ ಇಡದು ಮುದ್ದೆ ಮಾಡಿ ನುಂಗಿಸಬೇಕು... ಕೆಚ್ಚಲಿಗೆ ನೀರಾಕ್ದೆ ಹಾಲು ಕರಿಬಾರ್ದು ಸತ್ತೋದ ಕರೀನ ಹಸೀನ್ಹಾಲು ಹಿಂಡಬಾರ್ದು... ಹಾಲು ಕರಿಯೋ ಮುನ್ನ ವಕ್ಕಲಿಗನಾದೋನು ಊಟ ಮಾಡಬಾರ್ದು... ಎದ್ದ ಕೂಡ್ಲೆ ಎಳ್ಳು ಜೀರಿಗೆ ಬೆಳಿಯೋ ಭೂಮಿತಾಯ ನೆನಸಿಕೊಂಡು, ಸಂಬಳಿಲ್ಲದೆ ಸೇವೆ ಮಾಡೋ ಹನುಮಂತನನ್ನೂ ನಂತರ ಬಸಪ್ಪನನ್ನೂ ನೆನೆದು ಮುಖ ನೋಡಬೇಕು..." ಹೀಗೆ ಒಕ್ಕಲ ಹಲವಾರು ವಿಚಾರಗಳು ಮಡುಗಟ್ಟಿವೆ[೧]

ಮಲ್ಲೇಗೌಡರು ಹೊಲಕ್ಕೆ ಹುಚ್ಚೆಳ್ಳು ಹಾಕುತ್ತಿರಲಿಲ್ಲ. ಕಾರಣ ರಾಗಿ ಬೆಳೆ ಚೀಕಲಾಗುತ್ತದೆ ಎಂಬುದು[೨] ಅಂದಿನ ರೈತರು ಜಾನುವಾರುಗಳು ಹರ್ಷ ತಪ್ಪಿದರೆ ಅದಕ್ಕೆ ಔಷಧಿಯನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು. ಬೆಳೆಯ ಇಳುವರಿಯನ್ನು ಹೆಚ್ಚಿಕೊಳ್ಳುವುದಕ್ಕೆ ತಾವೇ ಪರಿಹಾರ ಕಂಡುಕೊಳ್ಳುತ್ತಿದ್ದರು. ಅನುಭವವೇ ಪಾಠವಾಗುತ್ತಿದ್ದುದು ಹೀಗೆ.

**ಕೃಷಿಸಲಕರಣೆಗಳು:** ರೈತನ ಬದುಕಿನ ಅಂಗಗಳಾಗಿರುವ ಸಾಧನ ಸಲಕರಣೆಗಳು ಮಾನವನ ತಾಂತ್ರಿಕ ಆವಿಷ್ಕಾರದ ವಿಕಾಸವನ್ನೇ ಸೂಚಿಸುತ್ತವೆ. ಪ್ರಾಚೀನ ಕಾಲದಿಂದಲೂ ಉಪಕರಣಗಳನ್ನು ಪವಿತ್ರ ವಸ್ತುಗಳೆಂದು ಪರಿಗಣಿಸಲಾಗಿದೆ.

**ಕೊಂಟೆಗಾಡಿ-** ಬಂಡಿ-ಗಾಡಿ ಎಂದು ಕರೆಯಿಸಿಕೊಳ್ಳುವ ಗೊಬ್ಬರ-ಗೋಡು, ಹುಲ್ಲು-ಮೇವು, ದವಸ-ಧಾನ್ಯಗಳ ಸಾಗಾಣಿಕೆಗೆ ಬಳಕೆಯಾಗುವ ಇದು ಅಂದಿನ ಶ್ರೀಮಂತರ ಉಪಕರಣ ಅಥವಾ ವಾಹನ. ತುಂಬಾ ದುಬಾರಿ ಬೆಲೆಯಾಗುವ ಇದನ್ನು ಹೆಚ್ಚು ಜಮೀನಿರುವ ರೈತ ಮಾತ್ರ ಇಟ್ಟುಕೊಂಡಿರುತ್ತಿದ್ದನು. ಕೊಂಟೆಗಾಡಿ; ಒಡ್ಡರಬಂಡಿ: ಮರದ

---

೧. ಸೊನ್ನೆಯಿಂದ ಸೊನ್ನೆಗೆ, ಪು. ೧೦೬-೧೦೭

೨. ಅದೇ, ಪು. ೧೦೮

ಹಲಗೆಯಿಂದ ಮಾಡಿದ ಚಕ್ರವನ್ನು ಹೊಂದಿದ್ದು ಕುಳ್ಳಾಗಿರುವ ಬಂಡಿ.[೧] ಗಾಡಿ ಎಂದರೆ ಈಗಿನ ತರಹಗಾಡಿಯಲ್ಲ. ಹಳೆಯ ರೀತಿಯ ಕೊಂಟೆಗಾಡಿ[೨] ಕೃಷಿ ಕೆಲಸ ಮತ್ತು ವಸ್ತು ಸಾಗಾಣಿಕೆಗೆ ಅಗತ್ಯವಾಗಿ ಬೇಕಾದ ವಾಹನವಾಗಿತ್ತು ಎಂಬುದನ್ನು ಇದರಿಂದ ಮನಗಾಣಬಹುದಾಗಿದೆ.

ಚನ್ನ ತನ್ನ ಹಳೆಯ ಪಂಟುಗಾಡಿ ಮಾರಿ ಅರೆಕೋಲು, ಮೂಕಿ ಇರುವ ಹೊಸಗಾಡಿಯನ್ನು ತಂದದ್ದು ಊರಿನ ಜನಕ್ಕೆ ವಿಮಾನಕ್ಕಿಂತಲೂ ಹೆಚ್ಚೆನಿಸಿತ್ತು ಎನ್ನುವಲ್ಲಿ ಆಗಿನ ಕಾಲಕ್ಕೋ ಮರದ ಗಾಡಿಯಲ್ಲೇ ಹೊಸ ಹೊಸ ಅನ್ವೇಷಣೆ, ಆವಿಷ್ಕಾರಗಳಾಗುತ್ತಿದ್ದುದನ್ನು ಗಮನಿಸಬಹುದು.

ಪಟ್ಟೆಬಿಡಿಸುವುದು – ಗಾಡಿಯ ಚಕ್ರಗಳಿಗೆ ತೊಡಿಸಿದ ಕಬ್ಬಿಣದ ಬಳೆಗಳು ಬಿಟ್ಟುಕೊಂಡರೆ ಅವನ್ನು ಕಾಯಿಸಿ ಚಕ್ರದ ಆಕಾರಕ್ಕೆ ಬಿಗಿಯಾಗುವಂತೆ ತೊಡಿಸಿ ನೀರು ಹಾಕಿ ಹಿಡಿದುಕೊಳ್ಳುವಂತೆ ಮಾಡುವುದು.

**ನೆಲಕಣಜ** – ಧಾನ್ಯ ದಾಸ್ತಾನಿನ ಸಾಧನವಾದ ಹಗೇವುಗಳು ಪ್ರತಿಹಳ್ಳಿಯಲ್ಲಿಯೂ ಕಾಣಸಿಗುತ್ತವೆ. ದೊಡ್ಡ ರೈತರು ತಮ್ಮ ಧಾನ್ಯಗಳನ್ನು ನೆಲದ ಒಳಗೆ ವರ್ಷಗಟ್ಟಲೆ ಕಾಪಿಡುತ್ತಿದ್ದ ದಾಸ್ತಾನು ಸ್ಥಳವೇ ನೆಲಕಣಜ ಅಥವಾ ಹಗೇವು. ಧಾನ್ಯ ತುಂಬಿದ ನಂತರ ಕಲ್ಲುಮುಚ್ಚಿ ಸುತ್ತಲೂ ಮಣ್ಣು ಬರೆಯುತ್ತಿದ್ದರು.[೩] ಕಾದಂಬರಿಯ ನಾಯಕ ಚನ್ನೆಗೌಡ ತನಗೆ ಸಿಕ್ಕ ವಡವೆಯ ಗಂಟನ್ನು ಇದರಲ್ಲಿಯೇ ಬಚ್ಚಿಡುತ್ತಾನೆ.

ಸಣ್ಣಪ್ರಮಾಣದ ದವಸ ದಾಸ್ತಾನಿನ ಸಾಧನಗಳಾಗಿ ಬಿದಿರು ಸಿಗುವ ಕಡೆ ಬಿದಿರಿನಿಂದಲೂ ಈಚಲ ಸಿಗುವ ಕಡೆ ಈಚಲದಿಂದಲೂ ಹೆಣೆದ ವಾಡೆ, ಕೊಮ್ಮೆ, ತೊಂಬೆ ಎಂಬ ಉಪಕರಣಗಳನ್ನು ಮನೆಗಳಲ್ಲಿ ಇಟ್ಟುಕೊಂಡಿರುತ್ತಾರೆ.

**ದಬ್ಬೆಗುಳ:** ಮರದ ನೇಗಿಲಿನ ಮುಂದಕ್ಕೆ ಸಿಕ್ಕಿಸಿರುವ ಕಬ್ಬಿಣದ ಮೊನಚಾದ ಉಪಕರಣ. ಉಳುವ ಸಂದರ್ಭದಲ್ಲಿ ನೆಲವನ್ನು ಸೀಳಲು ಹೆಚ್ಚು ಉಪಯುಕ್ತವಾದದು. ಇದು ನಾಗರಿಕತೆ ಅಥವಾ ಕೈಗಾರಿಕೀಕರಣದ ಪ್ರವೇಶವನ್ನು ಸೂಚಿಸುತ್ತದೆ. ದಬ್ಬೆಗುಳ ಬರುವುದಕ್ಕೆ ಮುನ್ನ ರೈತರು ಕಬ್ಬಿಣದ ಗಟ್ಟಿ ತಂದು ವಾಜರ ಕುಲುಮೆಯಲ್ಲಿ ಕಾಯಿಸಿ, ಬಡಿದು ತಮಗೆ ಬೇಕಾದ ಅಳತೆಯ ಗುಳ ಮಾಡಿಕೊಳ್ಳಬೇಕಾಗಿತ್ತು. ಅದು ಬಂದ ಬಳಿಕ ವಾಜರಿಗೆ ಒಂದಷ್ಟು ವ್ಯವಹಾಋ ಕುದುರಿ ಅವರೂ ಸ್ಥಿತಿವಂತರಾಗುತ್ತಿದ್ದರು ಎಂಬುದನ್ನು 'ದಬ್ಬೆಗುಳ ಬಂದು ಉದ್ದಾರವಾದ ವಾಜರ ಹೊನ್ನಯ್ಯ' ಎಂಬ ಸರ್ವಜ್ಞ ಸಂಗಣ್ಣನ ಮಾತಿನಿಂದ ನೆನೆಯಬಹುದು.

---

೧. ಕನ್ನಡ ಜಾನಪದ ಕೋಶ, ಕನ್ನಡ ಜಾನಪದ ಪರಿಷತ್ತು, ಪ್ರಧಾನ ಸಂಪಾದಕರು, ಹೆಚ್.ಎಲ್.ನಾಗೇಗೌಡರು.

೨. ಸೊನ್ನೆಯಿಂದ ಸೊನ್ನೆಗೆ, ಪು. ೧೧೯

೩. ಅದೇ, ಪು. ೧೩೭

ಎಡಗೊಡಲಿ, ಚಿಕ್ಕಗೊಡಲಿ, ಕುಯ್ಗತ್ತಿ, ಕುಡಲು, ಬೆಟ್ಟಕುಡಲು, ಮಚ್ಚು ಮೊದಲಾದ ಸಲಕರಣೆಗಳನ್ನು ಊರಿನ ವಾಜರಿಂದಲೇ ಮಾಡಿಸಿಕೊಳ್ಳುತ್ತಿದ್ದರು.

ಪ್ರಸ್ತುತದಲ್ಲಿ ಇಂದಿನ ರೈತನ ಬದುಕಿನಂತೆಯೇ ಅವನ ಸಾಧನ ಸಾಮಗ್ರಿಗಳೂ ತತ್ತರಿಸಿಹೋಗಿವೆ. ಆಧುನಿಕತೆಯಿಂದ ನಲುಗಿ ಹೋಗಿವೆ. ಟ್ರ್ಯಾಕ್ಟರ್, ಟಿಲ್ಲರ್‌ಗಳ ಪ್ರವೇಶ ಸಣ್ಣ ಹಿಡುವಳಿದಾರರನ್ನು ಕಂಗಾಲು ಮಾಡಿವೆ.

**ಕಮ್ಮಾರಿಕೆ–** ಕಬ್ಬಿಣದಿಂದ ವ್ಯವಸಾಯ, ಗೃಹನಿರ್ಮಾಣ, ಗೃಹಬಳಕೆಯ ವಸ್ತುಗಳನ್ನು ತಯಾರುಮಾಡುವ ಕಸುಬಿನವರು ಕಮ್ಮಾರರು. ಅವುಗಳನ್ನು ಸಿದ್ಧಪಡಿಸುವ ಜಾಗವನ್ನು 'ಕುಲುಮೆ ಮನೆ' ಎನ್ನುತ್ತಾರೆ. ಹಿಂದಿನ ಕಾಲದಲ್ಲಿ ಇವರು ಗ್ರಾಮಗಳಲ್ಲಿ ತಮ್ಮ ವೃತ್ತಿಯನ್ನು ನಿರ್ವಹಿಸುತ್ತಿದ್ದರು. ಒಕ್ಕಲುತನದ ಆಯದ ಮೇಲೆ ಜೀವನ ನಿಂತಿರುತ್ತಿತ್ತು. ಕಾಲ ಬದಲಾದಂತೆ, ಜೀವನಾವಶ್ಯಕತೆಗಳು ಹೆಚ್ಚಾದಂತೆ ಹಣಪಡೆದುಕೊಂಡು ಕೆಲಸಮಾಡ–ತೊಡಗಿದರು. ಕೃತಿಯಲ್ಲಿ ಮಲ್ಲೇಗೌಡರು ಆಚಾರಿ ಮುತುವರ್ಜಿ ವಹಿಸಿ ಕೆಲಸ ಮಾಡಲೆಂದು 'ಬೆಟ್ಟುಹಾಕಿದರೆ ಬೆಟ್ಟಳಿಯದಂಥ ಅಚ್ಚ ಹಸುವಿನ ಮಜ್ಜಿಗೆ, ತರಕಾರಿ, ನಾಲ್ಕಾರು ಪಾವುಗೋಳಿ'[೧] ಕೊಟ್ಟು ಮನವೊಲಿಸಿಕೊಂಡದ್ದನ್ನು ನೆನೆಯಬಹುದು.

**೫.೪ ನಂಬಿಕೆಗಳು – ಸಂಪ್ರದಾಯಗಳು:**

ಜಗತ್ತಿನ ಯಾವುದೇ ಭಾಗಕ್ಕೆ ಹೋದರೂ ಅಲ್ಲಿಯ ಜನರಿಗೆ ಗ್ರಾಹ್ಯವಾದ ಕೆಲವು ನಿರ್ದಿಷ್ಟವಾದ ನಂಬಿಕೆಗಳು, ಹರಕೆ, ಹಬ್ಬ, ಸಂಪ್ರದಾಯಗಳು ಇದ್ದೇ ಇರುತ್ತವೆ. ಜನಾಂಗೀಯ ಲಕ್ಷಣಗಳಾದ ಇವು ಕಾಲ, ಪ್ರದೇಶಗಳ ಭಿನ್ನತೆಯಿಂದ ಕೂಡಿರುತ್ತವೆ. ಭಾರತದಂತಹ ದೇಶದಲ್ಲಿ ಅವು ಸಾಂಸ್ಕೃತಿಕ, ಜಾನಪದೀಯ ವೈವಿಧ್ಯತೆಯಿಂದ ಕೂಡಿವೆ.

ಜನರು ಪರಂಪರೆಯಿಂದ ಪಡೆದುಕೊಂಡ ಅಥವಾ ತಾವು ಕಂಡುಕೊಂಡ ಆಳವಾದ ಶ್ರದ್ಧೆ, ವಿಶ್ವಾಸವನ್ನು 'ನಂಬಿಕೆ' ಎನ್ನಬಹುದು. ಇಂತಹ ನಂಬಿಕೆಗಳು ಗ್ರಾಮ್ಯರಿಗೆ ಧೈರ್ಯ, ಸ್ಫೂರ್ತಿ, ಪ್ರೇರಣೆಯನ್ನು ನೀಡುತ್ತವೆ.

ಹಿಂದಿನ ಜನರಲ್ಲಿ ಅದರಲ್ಲೂ ಹಳ್ಳಿಗಳಲ್ಲಿ ಲಿಂಗಾಯಿತರು ಮತ್ತು ಬ್ರಾಹ್ಮಣರಲ್ಲಿ ಶೂದ್ರರು ಅಪಾರ ಗೌರವ ಇಟ್ಟುಕೊಂಡಿದ್ದರು. ಇದಕ್ಕೆ 'ಶಿವಾಚಾರದವರ ಸೇವೆ'ಯು ಒಂದು ಉದಾಹರಣೆಯಾಗಿದೆ. ಊರಿನಲ್ಲಿನ ಮೇಲ್ಜಾತಿಯವರು ಉಂಡ ಎಂಜಲನ್ನು ಶೂದ್ರರು ತೆಗೆಯುತ್ತಿದ್ದರು. ಅವರಿಂದ ಎಂಜಲನ್ನು ಮುಟ್ಟಿಸಬಾರದೆಂಬ ನಂಬಿಕೆ ಇಟ್ಟಿದ್ದರು. 'ಉಣ್ಣೊ ಹೊತ್ತಿನಲಿ ಹಸಕೊಂಡಿರಬಾರ್ದು' ಎಂಬ ಮಾತಿನಲ್ಲಿ ಜನಪದರ ಮಾನವೀಯತೆಯನ್ನು

---

೧. ಸೊನ್ನೆಯಿಂದ ಸೊನ್ನೆಗೆ, ಪು. ೧೧೧

ಗುರುತಿಸಬಹುದಿತ್ತು. ಯಾರೇ ಕಂಡರೂ ಅವರಿಗೆ ಮೊದಲು ಬಡಿಸಿ ನಂತರ ತಾವುಣ್ಣುವುದು ರೂಢಿಯಿಂದ ಬಂದುದಾಗಿತ್ತು.

**ಮೀಸಲು ಮಾಡುವುದು:** ಮನೆ ಸಾರಿಸಿ ರಂಗೋಲಿ ಹಾಕಿ ದಾಸಯ್ಯನನ್ನು ಕರೆಸಿ ಸಂಖಿನ ಕೂಗು ಹಾಕಿಸಿ ಪೂಜೆ ಮಾಡಿಸುವ ಒಂದು ವಿಧಾನ. ಇದನ್ನು ಮಂಡ್ಯದ ಸುತ್ತಮುತ್ತ ಇಂದಿಗೂ ಆಚರಿಸುತ್ತಾರೆ. 'ಹೊಸ ಬೆಳೆ ಮೀಸಲು' ಎಂದು ಕರೆಯುವ ಈ ಪದ್ಧತಿ ಹೊಸ ಬೆಳೆ ಅಥವಾ ಕಾಳು ಬೆಳೆದಾಗ ದಾಸಯ್ಯನನ್ನು ಕರೆಸಿ, ದೇವರಿಗೆ ಎಡೆ ಇಟ್ಟು ಧೂಪಹಾಕುವ ಪ್ರವೃತ್ತಿಯನ್ನು ಹೇಳುತ್ತದೆ.

**ಮುನಿಮಾಡುವುದು:** (ಗದ್ದೆಯ ಬಳಿ ಪೂಜೆ ಮಾಡುವುದು) ಬಯಲು ಸೀಮೆಯಲ್ಲಿ ಇಂದಿಗೂ ಆಚರಿಸಲ್ಪಡುವ ಒಂದು ಪದ್ಧತಿ. ಮುನಿಮಾಡುವುದು ಎಂದರೆ ನಾಗರಪೂಜೆ ಮಾಡುವುದು ಎಂದರ್ಥ. ಜಮೀನಿನಲ್ಲಿ ಹಾವುಗಳು ಇದ್ದರೆ ಅವು ತೊಂದರೆ ಮಾಡದಿರಲೆಂದು ವರ್ಷಕ್ಕೊಮ್ಮೆ ಹಾವಿನ (ಮುನಿ) ಪೂಜೆ ಮಾಡುತ್ತಾರೆ. ಮಲ್ಲೇಗೌಡರು ಗದ್ದೆಯ ಬಳಿ ಮುನಿಮಾಡಿ.... ಮನೆಗೆ ಬರುತ್ತಿದ್ದರು.[೧]

ಮದುವೆ ಸಂಪ್ರದಾಯದಲ್ಲಿ ಹೆಣ್ಣು ಕೊಡುವಾಗ ದುಡಿಯುವ ಗಂಡಿಗೆ ಹೆಚ್ಚು ಪ್ರಾಶಸ್ತ್ಯವಿರುವುದನ್ನು ಕಾಣಬಹುದು. ದುಡಿಯೋನಿಗೆ ಹೆಣ್ಣು ಕೊಡಬೇಕೇ ಹೊರ್ತು...[೨] ಗಂಡ ಎಂದರೆ 'ಹೆಡ್ತಿ ಬೆನ್ನಿಗೆ ಕಟ್ಟಿಕೊಂಡು ಮರಹತ್ತಬೇಕು' ಎಂಬುದು ಅಂದಿನವರ ಅಭಿಮತವಾಗಿತ್ತು. ಹಾಗೆಯೇ ಹೆಣ್ಣು ತರುವಾಗಲೂ ಕೆಲವು ಸಂಪ್ರದಾಯಗಳನ್ನು ಪಾಲಿಸುತ್ತಿದ್ದರು. 'ಒಂದೂರಿಗ್ಹೆಣ್ಣ ಎಂದಿಗೂ ಕೊಡಬಾರದು. ಸಂದೆಯ ಸೊಪ್ಪು ಮಡುವಿನ ಗುಂಡಿನೀರ ತಂದಲ್ಲದವರತ್ತೆ ಕಳುವ್ಯಾಳು' ಎಂದೂ .. ಒಂದು ಹೆಣ್ಣು ಕೊಡಬೇಕಾದ್ರೂ, ತರಬೇಕಾದ್ರೂ ಒಂದು ತಿಟ್ಟಾದ್ರೂ ಮರೆಯಾಗಿರಬೇಕೆಂಬುದು ಅವರ ವಾದವಾಗಿತ್ತು.

ಹೆಣ್ಣನ್ನು ದೂರದಿಂದ ತರಬೇಕು
ದನಾನ ಹತ್ತಿರದಿಂದ ತರಬೇಕು

ಎಂಬ ಗಾದೆ ಮಾತಿನ ಅರ್ಥವೂ ಅದೇ ಆಗಿದೆ. ತವರು ಹತ್ತಿರವಿದ್ದರೆ ಹೆಣ್ಣು ಪದೇ ಪದೇ ಅಲ್ಲಿಗೆ ಹೋಗಬಹುದು. ಗಂಡನ ಮನೆಯವರಿಗೆ ಇದು ಅನಪೇಕ್ಷಣೀಯ. ದುಡಿಯುವ ಸೊಸೆ ಹೋದಾಗ ಕೆಲಸಗಳು ನಿಂತುಹೋಗುತ್ತವೆ ಎಂಬುದೂ ಅಲ್ಲದೆ ಅವಳನ್ನು ಕರೆಯುವ ನೆಪಮಾಡಿ ಮಗ ಹೋದರೆ ಮತ್ತೂ ಬಾಳುವೆ ಹಾಳೆಂಬುದು ಅವರ ಲೆಕ್ಕಾಚಾರವಾಗಿರಬೇಕು.

---

೧. ಸೊನ್ನೆಯಿಂದ ಸೊನ್ನೆಗೆ, ಪು. ೫೧

೨. ಅದೇ, ಪು. ೬೨

'ಬಾಮೈಕ್ಳಿರೋ ಮಲ್ಲಿ ಹೆಣ್ಣು ತಂದ್ರೆ ಬಂಗ ಬಡತನ ಕಾಯ್ತಾರೆ' ಎಂಬುದೊಂದು ಭಾವನೆಯಾಗಿತ್ತು. ಇದು ಹೆಣ್ಣು ಜನ್ಮಕ್ಕೆ ಅಣ್ಣತಮ್ಮರ ಅಗತ್ಯವನ್ನೂ ಹೇಳುತ್ತದೆ.

ಜಾತಿಕೆಟ್ಟವರನ್ನು ಕುಲದಿಂದ ಹೊರಗೆ ಹಾಕುವ, ಬೆಂಕಿ ಬಿಸಿನೀರಿನಿಂದ ದೂರವಿರಿಸುವ ಪದ್ಧತಿಯಿತ್ತು. ಕೃತಿಯಲ್ಲಿ ಚನ್ನನು ಅವರಿವರ ಮನೆಯೆನ್ನದೆ ಎಲ್ಲರ ಮನೆಯಲ್ಲೂ ಉಂಡಿದ್ದರಿಂದ 'ಜಾತಿಗೆಟ್ಟ'ನೆಂದು ತೀರ್ಮಾನಿಸಿ ಹೆಣ್ಣನ್ನು ಕೊಡಲು ನಿರಾಕರಿಸುತ್ತಾರೆ ಎಂಬ ಉಲ್ಲೇಖವಿರುವುದು ಅಂಥ ಪದ್ಧತಿ ಆಚರಣೆಯಲ್ಲಿದ್ದುದನ್ನು ತಿಳಿಸುತ್ತದೆ.

ಮದುವೆಗೆ ಮುನ್ನ 'ಹೆಸರುಬಲ' ಕೇಳುವುದು ರೂಢಿಯಿತ್ತು. ಮದುವೆಯಲ್ಲಿ ಗಂಡಿನ ಅಕ್ಕನೋ, ತಂಗಿಯೋ ಗಡಿಗೆ ಹಿಡಿಯುವುದು. ಇದನ್ನು 'ಒಡ್ಡುಟ್ಟಿನಗಡಿಗೆ' ಎನ್ನುತ್ತಾರೆ. ಮದುವೆಯ ದಿನ 'ದೇವಗಡಿಗೆ' ಪೂಜಿಸುವುದು. ಇಂದಿಗೂ ಚಾಲ್ತಿಯಲ್ಲಿದೆ. ಮದುವೆ ಅಂಗವಾಗಿ ಗಂಗಾಪೂಜೆ ಮಾಡಿ ದೇವರ ಮನೆಯಲ್ಲಿ ಪ್ರತಿಷ್ಠಾಪಿಸುವ ಪೂರ್ಣ ಕಳಸ ಇದು. ಈ ಗಡಿಗೆಯ ನೀರನ್ನು ಮದುವೆಯ ನಂತರ ವಿಧ್ಯುಕ್ತವಾಗಿ ಪೂಜೆಮಾಡಿ ಗಂಡು ಹೆಣ್ಣುಗಳಿಬ್ಬರೂ ಅಶ್ವತ್ಥವೃಕ್ಷಕ್ಕೆ ಸುರಿಯುತ್ತಾರೆ.

ಮದುವೆ ಮಾಡಿಕೊಡುವಾಗ ಕರೆಯುವ ಹಸು ಎಮ್ಮೆಗಳನ್ನೂ ಬಟ್ಟೆಬರೆಗಳನ್ನೂ ಬಳುವಳಿಯಾಗಿ ಕೊಡುವ ಸಂಪ್ರದಾಯವಿತ್ತು. ಚನ್ನೇಗೌಡರಂಥ ಅನುಕೂಲಸ್ಥರು ಒಂದೆರಡು ಚಿನ್ನದ ಒಡವೆಗಳನ್ನು ಕೊಡುತ್ತಿದ್ದರು. ನಗನಾಣ್ಯವನ್ನು ಸಂಗ್ರಹಿಸಿಡದೆ ಭೂಮಿ ದನಕರಗಳ ಮೇಲೆ ಹಾಕುವ ಆಲೋಚನೆ ಅವರದ್ದಾಗಿತ್ತು. ಚನ್ನೇಗೌಡರ ಬೆಳೆ, ವ್ಯಾಪಾರ – ಇವುಗಳನ್ನು ನೋಡಿ ಅವರದು 'ಗೊಬ್ಬರಗಾಲು' ಎನ್ನುತ್ತಿದ್ದರು. 'ಗೊಬ್ಬರಗಾಲು' ಎಂದರೆ ಒಳ್ಳೆಯ ಕಾಲು. ಸಮೃದ್ಧಿ ತರುವಂಥ ಕಾಲು. 'ಗೊಬ್ಬರ' ಎಂದರೆ ಗ್ರಾಮೀಣರಿಗೆ ಲಕ್ಷ್ಮಿ. ಗೊಬ್ಬರಗಾಲು ಎಂದರೆ ಅವರು ಕಾಲಿಟ್ಟ ಕಡೆ ಲಕ್ಷ್ಮಿ ತಾಂಡವವಾಡುತ್ತಾಳೆ ಎಂಬರ್ಥ.

**ಕೃಷಿ ಮತ್ತು ಮಳೆ:** ವ್ಯವಸಾಯದ ಉದ್ದೇಶ ಒಂದೇ ಆದರೂ ಕರ್ನಾಟಕದ ವಿವಿಧ ಭಾಗಗಳಲ್ಲಿ ವ್ಯವಸಾಯ ಪದ್ಧತಿ ಭೌಗೋಳಿಕ ಭಿನ್ನತೆಯಿಂದ ವಿಭಿನ್ನವಾಗಿವೆ. ಮಲೆನಾಡಿನಲ್ಲಿ ಬೇಕಾದಷ್ಟು ಮಳೆ ಬಂದರೂ ಉಳುಮೆಯ ಪ್ರದೇಶ ಕಡಿಮೆ. ಬಯಲುನಾಡಿನಲ್ಲಿ ಸಾಕಾದಷ್ಟು ಉಳುಮೆ ಪ್ರದೇಶವಿದ್ದರೂ ಸಕಾಲಕ್ಕೆ ಮಳೆಬಾರದೆ ಹಲವು ತೊಂದರೆಗಳನ್ನು ಎದುರಿಸುತ್ತಾರೆ. ಮಳೆಯ ಮೇಲೆಯೇ ಅವರ ವ್ಯವಸಾಯ ಅವಲಂಬಿತವಾಗಿರುತ್ತದೆ. ಮಳೆ ಬಾರದಿದ್ದಾಗ ಜನಪದ ನಂಬಿಕೆಗಳು ಗರಿಗೆದರುತ್ತವೆ. 'ಗದುಗಿನಭಾರತ'ವನ್ನು ಅದರಲ್ಲೂ ವಿರಾಟಪರ್ವವನ್ನು ಓದಲು ಶುರುಮಾಡುತ್ತಾರೆ. ವಾಚನ ಮುಗಿಯುವ ಹೊತ್ತಿಗೆ ಮಳೆ ಬರುತ್ತದೆ. ಅಷ್ಟಕ್ಕೂ ಮಳೆಬಾರದಿದ್ದರೆ ದೇವರಿಗೆ ನೂರೊಂದು ಕೊಡದ ರುದ್ರಾಭಿಷೇಕ – ಜಲಾಭಿಷೇಕಗಳು ನಡೆಯುತ್ತವೆ. ಅದಕ್ಕಾಗಿ ಮೊದಲೇ ಒಂದು ದಿನವನ್ನು ಗೊತ್ತುಮಾಡುತ್ತಾರೆ.

**ಮಳೆಶಾಸ್ತ್ರ:** ಮಳೆ ಬಾರದಿದ್ದರೆ ಮಳೆಗಾಗಿ ಪ್ರಾರ್ಥಿಸುವ ಸಂಪ್ರದಾಯ ಇಂದಿಗೂ ಕೆಲವೆಡೆ ಇದೆ. ಹುಯ್ಯೋ ಹುಯ್ಯೋ ಮಳೆರಾಯ, ಹೂವಿನ ತ್ವಾಟಕೆ ನೀರಿಲ್ಲ ಎಂದು ಹಾಡಿಕೊಂಡು ತಿರುಗುವುದು.[೧]

ನಂಬಿಕೆ ಸಂಪ್ರದಾಯಗಳು ಪ್ರದೇಶದಿಂದ ಪ್ರದೇಶಕ್ಕೆ ಬದಲಾಗುತ್ತಾ ಹೋಗುತ್ತವೆ. ಗ್ರಾಮೀಣರು ಅನೇಕ ಸಂಪ್ರದಾಯಗಳನ್ನು, ಪ್ರಶ್ನಿಸದೇ ಅನುಚಾನವಾಗಿ ನಡೆಸಿಕೊಂಡು ಬಂದದ್ದೂ ಇದೆ. ಸಂಪ್ರದಾಯಗಳಲ್ಲೆ ತಮ್ಮ ನೈತಿಕತೆಯನ್ನು ಗುರುತಿಸಿಕೊಂಡದ್ದೂ ಇದೆ.

**೫.೫. ಸಂಸ್ಕಾರ ವಿಧಿಗಳು:** ಜನನ ಕಾಲದಿಂದ ಪ್ರಾರಂಭವಾಗಿ ಬದುಕಿನ ಬೇರೆ ಬೇರೆ ಸಂದರ್ಭಗಳನ್ನೊಡಗೂಡಿ ಮರಣಕಾಲದವರೆಗೆ ಕೆಲವು ವಿಧಿಗಳನ್ನು ಆಚರಿಸುವ ರೀತಿ ಸಮುದಾಯದಿಂದ ಸಮುದಾಯಕ್ಕೆ ಬೇರೆಬೇರೆಯಾಗಿರುತ್ತದೆ. ಜೀವಂತ ವ್ಯಕ್ತಿಗೆ ಮಾಡುವ ವಿವಿಧ ಕ್ರಿಯಾಚರಣೆಗಳು ಎಷ್ಟು ಮುಖ್ಯವೋ ವ್ಯಕ್ತಿ ಸತ್ತ ನಂತರ ಮಾಡುವ ಕ್ರಿಯೆಗಳೂ ಅಷ್ಟೇ ಪ್ರಧಾನವಾಗಿರುತ್ತವೆ. ಪಂಚಭೂತಗಳಿಂದಾದ ಶರೀರವನ್ನು ಪಂಚಭೂತಗಳಿಗೇ ಒಪ್ಪಿಸುವುದಲ್ಲದೆ ದೇಹದಿಂದ ಹೊರಬಂದ ಆತ್ಮಕ್ಕೆ ಉತ್ತಮನೆಲೆಯನ್ನೂ ತೋರಿಸಿದಂತಾಗುತ್ತದೆ ಎಂಬ ವಿಶ್ವಾಸದಿಂದ ಸತ್ತವನ ದೇಹಕ್ಕೆ ಸಲ್ಲಿಸುವ ಅಂತಿಮ ಗೌರವವೇ ಶವಸಂಸ್ಕಾರ. ಸತ್ತನಂತರ ಮಾಡುವ ಶಾಂತಿಗಳು, ಉತ್ತರಕ್ರಿಯಾದಿಗಳು ಆ ವ್ಯಕ್ತಿಗೆ ಸತ್ತಮೇಲೂ ತೋರಿಸುವ ಗೌರವಕ್ಕೆ ಸಂಕೇತಗಳಾಗಿರುತ್ತವೆ.

ಕೃತಿಯಲ್ಲಿ ಕುಂಡಪ್ಪನ ತಾಯಿ ಸತ್ತಾಗ ಮಲ್ಲೇಗೌಡರ ಹೆಂಡತಿ ತಿಮ್ಮಾಜಮ್ಮ 'ಅಕ್ಕಿಯನ್ನು ಒಂದು ಹರಿವಾಣಕ್ಕೆ ಹಾಕಿ, ಒಂದಚ್ಚು ಬೆಲ್ಲ ಮಡಗಿ, ಸೊಡರು ಹತ್ತಿಸಿ ಅದನ್ನು ತಲೆದಸಿಯಲ್ಲಿಟ್ಟು, ಅಯ್ಯೋ ನನ್ನವ್ವಾ ಹೋಗಿಬತ್ತಿಯಾ! ಎಂದು ಕೈನಟಿಕೆ ಮುರಿದು ಹೆಣದ ಪಕ್ಕದಲ್ಲಿ ಕೂತಳು. ಆಮೇಲೆ ಬಂದ ಹೆಂಗಸರ ಸಹಾಯದಿಂದ ಕಾಲುಮಡಿಸಿ ಬಟ್ಟೆ ನೇವರಿಸಿ ಬಾಯಿದಂಬುಲ ಸಿದ್ಧಮಾಡಿದಳು. ಊರ ಹೆಂಗಸರು ಒಬ್ಬೊಬ್ಬರಾಗಿ ಬೊಗಸೆ ಕುಸುಬಲು ಅಕ್ಕಿ ಕಟ್ಟಿಕೊಂಡು ಬಂದು ಹರಿವಾಣಕ್ಕೆ ಹಾಕಿದರು!... ಶವಸಂಸ್ಕಾರದ ನಂತರ ಗೂಡಿನಲ್ಲಿ ಹಚ್ಚಿದ್ದ ಹಣತೆಯ ದೀಪಕ್ಕೆ ಕೈಮುಗಿದು ಅವರವರ ಮನೆಗಳಿಗೆ ಹೋದರು[೨] ಎಂಬ ಮಾಹಿತಿ ಅಂತ್ಯಸಂಸ್ಕಾರದ ಬಗೆಗೆ ಮಾಹಿತಿ ಒದಗಿಸಿದೆ.

ಸಂಪ್ರದಾಯದಂತೆ ಹನ್ನೊಂದನೆಯ ದಿನ ತಿಥಿ. 'ಹೆಗಲಮೇಲೆ ನೀರಿನ ಹರವಿಯನ್ನು ಭಾರವಾಗದಂತೆ ಹೊರಿಸಿ ಸುತ್ತುಸುತ್ತಿಗೆ ಕುಡಲಿನ ತುದಿಯಿಂದ ತೂತು ಕುಕ್ಕಿ ನೀರು ಸುರಿಸಿ ಕೊನೆಯ ಸುತ್ತಿನಲ್ಲಿ ದಢಾರನೆ ಎತ್ತಿಹಾಕಿಸಿದ್ದೂ, ಲಬಲಬಾ ಎಂದು ಬಾಯಿ ಬಡಿದುದು... ಈ ಎಲ್ಲ ದಟ್ಟವಾದ ಗ್ರಾಮ್ಯ ಅನುಭವಗಳನ್ನು ಲೇಖಕರು ಕಣ್ಮುಂದೆ ತಂದು ನಿಲ್ಲಿಸುತ್ತಾರೆ.

---

೧. ಸೊನ್ನೆಯಿಂದ ಸೊನ್ನೆಗೆ, ಪು. ೨೦೦

೨. ಅದೇ, ಪು. ೩೭

ಕುಂಡಪ್ಪನ ತಾಯಿಯ ಉತ್ತರ ಕ್ರಿಯಾದಿ ಅವನು ಬಡವನಾದ್ದರಿಂದ ಊರೊಟ್ಟಿನ ರಾಗಿ, ಅವರೆಕಾಳಿನಲ್ಲಿ ಮುಗಿಯಿತು ಎಂದು ಹೇಳಿ ದಿಕ್ಕಿಲ್ಲದವರಿಗೆ ಉಳ್ಳವರು ನೆರವಾಗುತ್ತಿದ್ದುದು ತಿಳಿಯುತ್ತದೆ.

ಕಾಲಾನಂತರ ಕುಂಡಪ್ಪ ಕೊರಕಲಿಗೆ ಬಿದ್ದು ಸತ್ತಾಗ ಗುರುಮಲ್ಲಯ್ಯನವರ ನಿರ್ದೇಶನದಂತೆ ಇರುವಂತೆಯೇ ಅಲ್ಲೆ ಪೂಜಿಸಿ ಸಮಾಧಿ ಮಾಡಲಾಯಿತು. ಅಲ್ಲೆ ಗುದ್ದದ ಮೇಲೆ ತುಂಬೆಗಿಡ ನೆಡಲಾಯಿತು.[೧] ತಲೆಕೊಳ್ಳಿಯನ್ನು ಕುಂಡಪ್ಪನ ಏಕೈಕ ವಾರಸುದಾರ ಚನ್ನನೇ ಹಿಡಿದು ಕುಂಡಪ್ಪನ ತಿಥಿಯೂ ಊರೊಟ್ಟಿನ ದವಸ ಧಾನ್ಯದಿಂದಲೇ ಮುಗಿಯಿತು ಎಂಬಲ್ಲಿಯೂ ಅದೇ ಅಂಶವನ್ನು ಕಾಣುತ್ತೇವೆ.

'ಸ್ಮಶಾನ ವೈರಾಗ್ಯ' ಹಗೆತನ ಮರೆತು ಎಲ್ಲರನ್ನು ಒಂದು ಮಾಡುತ್ತದೆ. ಊರೊಟ್ಟಿನ ಹಣತಿಂದಿದ್ದ ಕುಂಡಪ್ಪನ ತಂದೆಯ ದೈವದ್ರೋಹವನ್ನು ಮರೆತು ಜನ ಒಂದಾದುದು ಗ್ರಾಮ್ಯ ಜೀವನಕ್ಕೆ ಹಿಡಿದ ಕನ್ನಡಿ ಹಿಡಿದಂತಿದೆ. ಅವರ ಮುಗ್ಧತೆ, ಮಾನವತೆಯನ್ನು ಸೂಚಿಸುತ್ತದೆ. ಇಲ್ಲಿ ಎಚ್.ಎಲ್.ನಾಗೇಗೌಡರು ಒಂದು ಪ್ರದೇಶದ ಮರಣೋತ್ತರ ಕ್ರಮಗಳನ್ನು ಸಮರ್ಥವಾಗಿ ನಿರೂಪಿಸಿದ್ದಾರೆ. ಹಾಗೆಯೇ ಆ ಸಂದರ್ಭಗಳು ಭಾವಾನಾತ್ಮಕ ಮತ್ತು ನೈತಿಕ ಸಂಬಂಧಗಳನ್ನು ಎತ್ತಿ ಹೇಳುತ್ತವೆ. ಒಬ್ಬ ಗೌರವಾನ್ವಿತ ವ್ಯಕ್ತಿ ತನ್ನ ಪರಿಸರಕ್ಕೆ ಹೇಗೆ ಸ್ಪಂದಿಸಬಲ್ಲ, ಸನ್ನಿವೇಶವನ್ನು ಯಾವ ರೀತಿ ಅರ್ಥೈಸಿಕೊಳ್ಳಬಲ್ಲ, ತನ್ನ ಸ್ಥಾನವನ್ನು ಹೇಗೆ ಕಂಡುಕೊಳ್ಳಬಲ್ಲ, ಎಷ್ಟು ಮರ್ಯಾದೆಯಾಗಿ ವರ್ತಿಸಬಲ್ಲ ಎಂಬೆಲ್ಲ ಅಂಶಗಳು ಊರಗೌಡರ ವಿಚಾರದಲ್ಲಿ ನಿರೂಪಿತವಾಗಿವೆ.

--

೧. ಸೊನ್ನೆಯಿಂದ ಸೊನ್ನೆಗೆ, ಪು. ೬೫

## ಅಧ್ಯಾಯ : ಆರು

# ಜನಪದರ ಭಾಷಾವೈವಿಧ್ಯ

ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಕನ್ನಡ ಸಾಹಿತ್ಯದಲ್ಲಿ ನವೋದಯ ಸಂದರ್ಭ ರೂಪುಗೊಂಡು ವೈವಿಧ್ಯವನ್ನು ಪಡೆಯಿತು. ಅದರ ಹಿಂದಿರುವ ಜಾನಪದದ ಮಹತ್ತರವಾದ ಕೊಡುಗೆಯನ್ನು ಯಾರೂ ತಳ್ಳಿಹಾಕುವಂತಿಲ್ಲ. ಅಲ್ಲಿಯವರೆಗೆ ಅಂತರ್ವಾಹಿನಿಯಾಗಿದ್ದ ಜಾನಪದ ತನ್ನೆಲ್ಲ ಗುಣಲಕ್ಷಣ ಸ್ವರೂಪಗಳೊಂದಿಗೆ ಬಹಿರಂಗವಾಗಿ ಕಾಣಿಸಿಕೊಂಡಿತು. ವಿಶಿಷ್ಟ ಸಂವೇದನೆ, ಸಂಸ್ಕಾರ, ಅನ್ಯಪ್ರಭಾವಗಳನ್ನು ಕನ್ನಡ ಭಾಷೆಯ, ಸಂಸ್ಕೃತಿಯ ಜಾಯಮಾನಕ್ಕೆ ಅನುಗುಣವಾಗಿ ಒಗ್ಗಿಸಿಕೊಳ್ಳಬೇಕಾದ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಲುಕಿ ತೊಳಲಾಡಿದ ನವೋದಯ ಸಂಪ್ರದಾಯದ ಕವಿಗಳಿಗೆ ಜಾನಪದ ತವನಿಧಿಯಾಗಿ ಕಂಡದ್ದರಲ್ಲಿ ಆಶ್ಚರ್ಯವಿಲ್ಲ. ಜನಸಾಮಾನ್ಯರ ಬದುಕಿನಲ್ಲಿ ಉತ್ತಮವಾದುದೂ ಇದೆ ಎಂಬ ಅಂಶವನ್ನು ಕಂಡುಕೊಂಡು ಅದರ ಸೊಗಡು, ಸೊಗಸು, ಸತ್ವ, ಬನಿಗಳನ್ನು ಸಂಪನ್ಮೂಲವಾಗಿ ಬಳಸಿಕೊಂಡು, ಜನರ ಬದುಕಿನಿಂದ ದೂರವಾಗಿದ್ದ ಸಾಹಿತ್ಯವನ್ನು ಜನಮನದ ಹತ್ತಿರಕ್ಕೆ ತರಲು ಪ್ರಯತ್ನಿಸಿ ಸಫಲರಾದರು.

ನವೋದಯ ಕವಿಗಳು ಜನಪದ ಕಾವ್ಯದ ಸಹಜ ವರಸೆಗಳನ್ನು ಕಸಿ ಮಾಡಿದರು. ಬೇಂದ್ರೆ, ಚಂದ್ರಶೇಖರ ಕಂಬಾರ, ಚನ್ನಣ್ಣವಾಲೀಕಾರರು ತಮ್ಮ ಕಾವ್ಯದಲ್ಲಿ ಜನಪದ ಭಾಷೆಯನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಅವು ಜನಪದ ಆವರಣದಿಂದ ಭಾವ ಶ್ರೀಮಂತಿಕೆಯನ್ನು ಪಡೆದ ನುಡಿಗೊಂಚಲುಗಳು.

'ಸೊನ್ನೆಯಿಂದ ಸೊನ್ನೆಗೆ' ಕಾದಂಬರಿ ಪ್ರಾದೇಶಿಕ ಭಾಷೆಯ ಬೆಡಗನ್ನು ಮೈಗೂಡಿಸಿಕೊಂಡು ಅವತರಿಸಿದ ಕೃತಿಯಾಗಿದೆ. ಇದರ ಅವಲೋಕನದಿಂದ ಒಂದು ಅರ್ಥಕೋಶವನ್ನು ತೆರೆಯುವ ಸಾಧ್ಯತೆಯಿದೆ. ಇದು ಅಪೂರ್ವವಾದ ಬಯಲುಸೀಮೆಯ ಪದ, ನುಡಿಗಟ್ಟು, ಬೈಗುಳ, ಗಾದೆಗಳ ಆಗರವಾಗಿದೆ ಈ ಕಾದಂಬರಿ. ಆಡುಮಾತಿಗೂ ಜನರ ಜೀವನಕ್ಕೂ ಅರ್ಥಪೂರ್ಣವಾದ ಸಂದರ್ಭ ಏರ್ಪಡುವುದರಿಂದ ಗ್ರಾಮೀಣ ಭಾಷೆಯ ಸತ್ವವನ್ನು, ಮಣ್ಣಿನಗುಣವನ್ನು ಉಳಿಸಿಕೊಂಡು ಅನನ್ಯತೆಯಿಂದ ಕೂಡಿದೆ. ಇಲ್ಲಿ ಬಂದಿರುವ ಕೆಲವು ಪಡೆನುಡಿಗಳು ಪ್ರಾದೇಶಿಕ ವೈಶಿಷ್ಟ್ಯದಿಂದ ಕೂಡಿವೆ.

ಪ್ರಾದೇಶಿಕ ಕಾದಂಬರಿಯ ಆವರಣವನ್ನು ಸೃಷ್ಟಿಸುವಲ್ಲಿ ಭಾಷೆ ಬಹುಮುಖ್ಯ ಪಾತ್ರವಹಿಸುತ್ತದೆ. ಆ ಪ್ರದೇಶದ ನಂಬಿಕೆ, ನಡವಳಿಕೆ, ರೀತಿ–ನೀತಿ, ಪ್ರಚಲಿತ ನುಡಿಗಟ್ಟು ಇವೆಲ್ಲಾ ಭಾಷಾಮಾಧ್ಯಮದ ಮೂಲಕವೇ ಹೊರಬರಬೇಕು. ವಿಷಯದ ಸ್ಪಷ್ಟತೆಗಾಗಿ ಗಾದೆಗಳು, ಪಡೆನುಡಿಗಳು ಊರುಗೋಲಾಗಿ ಬರುತ್ತವೆ. ಈ ಕಾದಂಬರಿಯಲ್ಲಿ ಬರುವ ಭಾಷೆ ಬಯಲುಸೀಮೆಯ ಜನರ ಅಪ್ಪಟ ಆಡುಭಾಷೆ. ಪ್ರತಿಯೊಂದು ಪದವೂ ಗ್ರಾಮ್ಯಭಾಷೆಯ

ಮೂಲಸತ್ವವನ್ನು ಮೈಗೂಡಿಸಿಕೊಂಡಿದ್ದು ಕಾದಂಬರಿಯನ್ನು ಜೀವಂತವಾಗಿರಿಸಿವೆ. ಸಮಯಕ್ಕೆ ಸರಿಯಾಗಿ ಸಿಡಿದು ಬಂದಿರುವ ಗಾದೆಗಳು ಮಣ್ಣಿನ ವಾಸನೆಯಿಂದ ಕಂಗೊಳಿಸಿವೆ.

**೬.೧ ಗಾದೆಗಳು**

ಶ್ರೀ ನಾಗೇಗೌಡರು ಬಳಸಿರುವ ಗಾದೆಗಳ ಸಂಖ್ಯೆಯನ್ನು ಗಮನಿಸಿದರೆ ಗಾದೆಗಳಿಂದಲೇ ಒಂದು ಕಾದಂಬರಿಯನ್ನು ಬರೆಯಬಲ್ಲರೆನೋ ಎನಿಸುತ್ತದೆ ಎಂಬ ಪ್ರೊ.ಹಿ.ಶಿ.ರಾಮಚಂದ್ರಗೌಡರ ಮಾತು ಸತ್ಯಕ್ಕೆ ಹತ್ತಿರವಾದುದು. ಸೊನ್ನೆಯಿಂದ ಸೊನ್ನೆಗೆ ಕಾದಂಬರಿಯಲ್ಲಿ ಸುಮಾರು ೫೦ಕ್ಕೂ ಹೆಚ್ಚು ಗಾದೆಗಳು ಸಮಯೋಚಿತವಾಗಿ ಬಳಕೆಯಾಗಿದ್ದು ಕೃತಿಯ ಬೆಲೆಯನ್ನು ಹೆಚ್ಚಿಸಿವೆ.

**ಕೃತಿಯಲ್ಲಿ ಬಂದಿರುವ ಗಾದೆಗಳು**

ರುದ್ರನಿಗಭಿಷೇಕ ಇಷ್ಟುಗಲಂಕಾರ – (ಪು. ೨೧)

ಬರೀ ಈಬತ್ತಿ ಭಕ್ತರ ಕೆಡಸ್ತು (ಪು. ೫)

ನೂತರೆ ಕೇಡೇ ಮೊಮ್ಮಗಳೆ (ಪು. ೧೦)

ವಡ್ಡನಿಗೊಂದೂರೆ ಕೊಕ್ಕರನಿಗೊಂದು ಕೆರಿಯೆ (ಪು. ೧೬)

ಇರುಳಗ ಯಾರ ಮೆಚ್ಗದಿದ್ರೂ ಭಾಮೈದ್ನ ಮೆಚ್ಚಬೇಕು (ಪು. ೧೯)

ಊರಿಗೆ ಕುಳವಲ್ಲ ಸ್ಮಶಾನಕ್ಕೆ ಹೆಣವಲ್ಲ (ಪು. ೨೧)

ಕಡಿ ಅಂದ್ರೆ ಕಪ್ಪೆಗೆ ಕ್ವಾಪ, ಬಿಡಿ ಅಂದ್ರೆ ಹಾವಿಗೆ ಕ್ವಾಪ (ಪು. ೨೧)

ವಕ್ಲಿಗರ ಜಗಳ ಮರಿ ಊಟದಲ್ಲಿ ತೀರೋಯ್ತದೆ. (ಪು. ೨೧)

ಹತ್ತು ಜನಕ್ಕೆ ಮುದ್ದಾಗಿರಬೇಕು, ಹಸುಮಗೀನಂಗಿರಬೇಕು (ಪು. ೨೨)

ದಾಸಯ್ಯ ಎತ್ತೋ ದನಕರ ಎತ್ತೋ (ಪು. ೨೩)

ಮ್ಯಾಲೆ ಬಮ್ಮನ ಧ್ಯಾನ ಒಳಗೆ ಗುಮ್ಮನ ಗ್ಯಾನ (ಪು. ೨೬)

ಸತ್ತೋನು ಸತ್ತ, ಹೊತ್ತೋನು ಸತ್ತ (ಪು. ೨೯)

ಮಾಡಿದುಣ್ಣೋ ಮಾರಾಯ (ಪು. ೩೩)

ಬಡವನ ಹೆಂಡತಿ ಊರಿಗೆಲ್ಲ ಅತ್ತಿಗೆ (ಪು. ೩೪)

ಕುಂಡ ಸೌದೆ ಒಡದ್ರೆ ಕೊಡ್ಲಿ ಮುಕ್ಕು

ಊರಿದ್ದ ಕಡೆ ಹೊಲಗೇರಿ (ಪು. ೬೮)

ಉಗುಳ ನುಂಗಿದ್ರೆ ಹೊಟ್ಟೆ ತುಂಬುತ್ತೆ? (ಪು. ೭೩)

ಎರಡು ಕಣ ಕಾದು ದಾಸಯ್ಯ ಕೆಟ್ಟ (ಪು. ೭೩)

ಅರಿಶಿನ ಕೂಳಿಗ್ಹೋಗಿ ವರಷದ ಅನ್ನ ಕಳಕೊಂಡಂಗೆ (ಪು. ೭೫)

ನೆರೆಮನೆ ಮುದ್ದೆ ಮಾರಿಗುಡಿ ನಿದ್ದೆ (ಪು. ೭೫)

ಕೈತೂಕ ಬಾಯಿಬಣ್ಣ (ಪು. ೭೫)

ಅಟ್ಟ ಮೇಲೆ ಒಲೆ ಉರಿಯಿತು, ಕೆಟ್ಟ ಮೇಲೆ ಬುದ್ಧಿ ಬಂತು (ಪು. ೭೬)

ಎಳಗರು ಎತ್ತಾಗೋದಿಲ್ಲವಾ? (ಪು. ೮೧)

ಕುಂತರೆ ಕುರುಬ, ನಿಂತರೆ ಕಿರುಬ ( ಪು. ೮೮)

ಮಧ್ಯಸ್ಥರಿಲ್ಲದ ಊರಿನಲ್ಲಿ ಮಧ್ಯಾಹ್ನತನಕ ಇರಬೇಡ (ಪು. ೮೯)

ಸಾಲಗೂಡಿ ಸಾಲ, ಕಾಯಿಸ್ಲೇ ಕಾಹಾಲ (ಪು. ೯೮)

ನಿನ್ನರಿಸ್ಯಾವೆ ಕೆಡಸ್ತೇ ಇದ್ರೆ ನಾನು ದಾಸಯ್ನೆ (ಪು. ೧೦೨)

ಸೀಗೆ ಮೆಳೆ ನಡುವೆ ಬಾಳೆ ಬೆಳೆದಂಗೆ (ಪು. ೧೦೨)

ಬಯ್ತ ಹೇಳೋರು ಬದುಕ ಹೇಳಿದ್ರು; ನಗ್ತ ಹೇಳ್ದೋರು ಕೆಡಕ ಹೇಳಿದ್ರು (ಪು. ೧೧೩)

ಹೊಲದಲಿ ಗಂಡ್ಸಾಗಬೇಕು; ಮನೇಲಿ ಹೆಂಗ್ಸಾಗಬೇಕು (ಪು. ೧೧೫)

ಹೆಣ್ಣು ಹೆತ್ತು ಅರೀತು; ಎತ್ತು ಉತ್ತು ಅರೀತು (ಪು. ೧೧೫)

ಇಕ್ಕದ ಕೈ ಎಂಜಲು (ಪು. ೧೧೫)

ಹಳೆಬಟ್ಟೆಗೆ ನೂಲುಗೇಡು (೧೧೮)

ರಾಯ ರಾಜ್ಯ ಅಳಿದರೂ ರಾಗಿ ಬೀಸುವುದು ತಪ್ಪುವುದಿಲ್ಲ (ಪು. ೧೩೨)

ಗೌಡರುಗಳು ಉಬ್ಬಿದರೆ ಹೊಲೆಯ ಒಂದು ಸುಬ್ಬಿ ಹೆಂಡ ಕುಡಿದಂತೆ (ಪು. ೧೪೬)

ಸುಂಕದವನ ಹತ್ರ ಸುಖದುಃಖ ಹೇಳಿಕೊಂಡಂಗೆ (ಪು. ೧೫೧)

ಕಿಮ್ಮೂಳಿ ತಲೆಮ್ಯಾಲೆ ದೇವರು ಹೊರಿಸ್ದಂಗೆ (ಪು. ೧೬೯)

ಬಡವನ ಮನೆ ಹೆಣ್ಣು ತಾ, ಬಲ್ಲಿದರ ಮನೆಗೆ ಕೊಡು (ಪು. ೧೭೧)

ಸತ್ತ ಮಕ್ಕಳ ಸಕುನ ಕೇಳ್ದಂಗೆ (ಪು. ೧೭೩)

ಕೊಟ್ಟೋರೊಡ್ವೆ ಕೊಡ್ಲಿಲ್ಲ, ನೆಟ್ಟ ಮರಕೆ ನೀರುಯ್ಯಲಿಲ್ಲ (ಪು. ೧೭೩)

ಮಾತು ಭಾರಿ, ಮಾರು ಪಿಚ್ಚೆ (ಪು. ೧೭೩)

ಹಿರಿಯಕ್ಕನ ಚಾಳಿ ಮನೆ ಮಕ್ಕಳಿಗೆಲ್ಲ (ಪು. ೧೮೪)

ಮೆಣಸು ಹುಳಿತರೂ ಜೋಳಕ್ಕಿಂತ ಕುಂದೆ? (ಪು. ೧೯೯)

ಹಗ್ಗ ತಿನ್ನೋರ್ಮಲ್ಲಿ ಹಪ್ಪಳ ಕೇಳಿದಂಗೆ

ಒಂದೇ ಊರಲ್ಲಿ ಹೆಣ್ಣ ತರಬಾರ್ದು... ಒಂದು ತಿಟ್ಟಾದರೂ ಮರೆಯಾಗಿರಬೇಕು (ಪು. ೯೩)

ಕೇಡುಗಾಲ್ಕೆ ಕ್ವಾಡಗನ ಬುದ್ಧಿ ಅಂದಂಗೆ (ಪು. ೩೩)

ಇಲ್ಲಿ ಕೆಲವೊಂದು ಗಾದೆಗಳನ್ನು ವಿಶ್ಲೇಷಿಸಲಾಗಿದೆ.

ಗಾದೆಯ ವಿಶ್ಲೇಷಣೆಯನ್ನು ಎಚ್ಚರಿಕೆಯಿಂದ ಮಾಡಬೇಕಾದುದು ಅವಶ್ಯಕ. ಏಕೆಂದರೆ, ಗಾದೆಯ ಅಂತರಾತ್ಮದ ಅರಿವು ನಮಗಾಗಬೇಕಾದರೆ ಅದರ ಹಿನ್ನೆಲೆಯನ್ನು ಹುಡಕ-ಬೇಕಾಗುತ್ತದೆ. ಅದರ ಹಿಂದೆ ಕಥೆಯೋ ಘಟನೆಯೋ ಸಂವಾದವೋ ಸಂಸ್ಕೃತಿಯೋ

ಅಡಗಿರಬಹುದು. ಅದನ್ನು ಯೋಚಿಸಿ ಹೊರತೆಗೆಯಬೇಕಾದಾಗ ಹಲವಾರು ಬಾರಿ ಯೋಚಿಸುವ ಅಗತ್ಯವಿದೆ. ಗ್ರಾಮೀಣರ ಎಲ್ಲ ಭಾವಾಭಿವ್ಯಕ್ತಿಯೂ ಒಂದೆರಡು ಸಾಲಿನಲ್ಲಿ ಕೆನೆಗಟ್ಟಿರುವುದುರಿಂದ ಅದರ ವಿಘಟನೆ ಸುಲಭಸಾಧ್ಯವಾದದ್ದಲ್ಲ ಎಂಬುದು ನನ್ನ ಅಭಿಪ್ರಾಯ.

**ಬರೀ ಈಭತ್ತಿ ಭಕ್ತರ ಕೆಡಸ್ತು:**

'ಗೂಳೂರು ಗಟ್ಟಿ ಏಳೂರು ಅನ್ನ ಕೆಡಿಸಿತು'– ಎಂಬ ಗಾದೆಯ ಅಂತರಂಗವನ್ನು ಪ್ರೊ.ಸುಧಾಕರ ಅವರು ವಿಶ್ಲೇಷಿಸಿದ್ದಾರೆ. ಅದರ ವಿವರಣೆಯು 'ಬರೀ ಈಭತ್ತಿ ಭಕ್ತರ ಕೆಡಸ್ತು' ಎಂಬ ಗಾದೆಗೂ ಅನ್ವಯಿಸುತ್ತದೆ ಎಂಬ ಭಾವನೆ ನನ್ನದು. ಅದು ಈ ಮುಂದಿನಂತೆ ಇದೆ.

ವೀರಶೈವರು ಅಥವಾ ಲಿಂಗಾಯಿತರು ವಿಭೂತಿ ಧರಿಸುವುದು ರೂಢಿಯಲ್ಲಿದೆ. ಗ್ರಾಮಾಂತರ ಪ್ರದೇಶದಲ್ಲಿ ಅವರ ಪ್ರಭಾವದಿಂದಲೋ ಏನೋ ಒಕ್ಕಲಿಗರೂ ಇತರರೂ ವಿಭೂತಿ ಹಚ್ಚುವುದು ಚಾಲ್ತಿಯಲ್ಲಿದೆ. ಲಿಂಗಾಯಿತರು ವಿಭೂತಿ ಧರಿಸಿದ ನಂತರವೇ ಊಟ ಮಾಡುತ್ತಾರೆ. ಹಣೆಯ ಮೇಲಿನ ವಿಭೂತಿಯೇ ಅವರು ಊಟ ಮಾಡಿರುವುದಕ್ಕೆ ಸಾಕ್ಷಿ. ''ಯಾರೋ ಒಬ್ಬ ತಾನು ಭಕ್ತನೆಂದೋ ನೇಮವಂತನೆಂದೋ ತೋರಿಸಿಕೊಳ್ಳಲು ಹಣೆಯ ಮೆಲೆ ದೊಡ್ಡದಾಗಿ ವಿಭೂತಿ ಪಟ್ಟೆ ಎಳೆದುಕೊಂಡು, ಯಾವುದೋ ಕಾರ್ಯನಿಮಿತ್ತ ಪರ ಊರಿಗೆ ಹೋದನೆಂದು ತೋರುತ್ತದೆ. ಅವನ ಹಣೆಯ ಮೇಲಿನ ವಿಭೂತಿ ನೊಡಿ ಊಟವಾಗಿದೆ ಎಂದು ನಿರ್ಧರಿಸಿದ ಜನ ಅವನನ್ನು ಊಟಕ್ಕೆ ಕರೆಯಲಿಲ್ಲ. ಹಸಿದು ಹಣ್ಣಾಗಿ, ಸತ್ತು ಸುಣ್ಣವಾಗಿ ಊರಿಗೆ ಹಿಂದಿರುಗಿದ[೧] ಅದನ್ನು ಗಮನಿಸಿದವರಿಂದಲೋ ಅಥವಾ ಅವನ ಬಾಯಿಂದಲೇ 'ಬರೀ ಈಭತ್ತಿ ಭಕ್ತರ ಕೆಡಸ್ತು'ಎಂಬ ಮಾತು ಹೊರಬಿದ್ದಿರಬೇಕು.

**ನೂತರೆ ಕೇಡೇ ಮೊಮ್ಮಗಳೇ ಅಂದಂಗೆ"**

ಆಕಾರದಲ್ಲಿ ವಾಮನನಂತಿದ್ದರೂ ಅರ್ಥದಲ್ಲಿ ತ್ರಿವಿಕ್ರಮನಂತಿರುವ ಗಾದೆಗಳು ಜನಪದ ಜೀವನದ ಸಾರಸರ್ವಸ್ವವನ್ನೆಲ್ಲ ಭಟ್ಟಿರೂಪದಲ್ಲಿ ಒಳಗೊಂಡಿರುವ ರಸಘಟ್ಟಿಗಳು[೨] ನಾಗೇಗೌಡರ ಕೃತಿಯಲ್ಲಿ ಸಮಯೋಚಿತವಾಗಿ ಬಂದಿರುವ ಗಾದೆಗಳು ಕೃತಿಯ ಮೆರಗನ್ನು ಹೆಚ್ಚಿಸಿವೆ.

ನೂತರೆ ಕೇಡೆ ಮೊಮ್ಮಗಳೇ ಎಂಬ ಮಾತು ಅಜ್ಜಿಮೊಮ್ಮಗಳಿಗೆ ಹೇಳುವ ರೀತಿಯಲ್ಲಿದೆ. ಸಂವಾದಾತ್ಮಕ ಗಾದೆ. ಈ ಗಾದೆಯ ಹಿನ್ನೆಲೆ ಹೀಗಿರಬಹುದು. ನೂಲುತ್ತಿರುವುದನ್ನು ಮೊಮ್ಮಗಳು ಗಮನಿಸುತ್ತಿದ್ದಿರಬೇಕು. ನೋಡಿ ಉತ್ತೇಜಿತಳಾಗಿ ತಾನೂ ನೂಲುವುದಾಗಿ ಆಸೆ ವ್ಯಕ್ತಪಡಿಸಿರಬೇಕು. ಅದನ್ನು ಕೇಳಿದ ಅಜ್ಜಿ 'ನೂತರೆ ಕೇಡೇ ಮೊಮ್ಮಗಳೆ' ಎಂದಿದ್ದಾಳೆ.

---

೧. ನಮ್ಮ ಸುತ್ತಿನ ಗಾದೆಗಳು, ಪ್ರೊ. ಸುಧಾಕರ, ಎರಡನೆಯ ಮುದ್ರಣ, ೧೯೮೭, ಪ್ರತಿಭಾ ಪ್ರಕಾಶನ

೨. ಸುಧಾಕರ, ಕನ್ನಡ ಒಗಟುಗಳು, ಹೊನ್ನಬಿತ್ತೇವು ಹೊಲಕೆಲ್ಲ, ಪು. ೨೪೨–೪೩

ಕೃತಿಯಲ್ಲಿ ಇದು ಬಳಕೆಯಾಗಿರುವ ಸಂದರ್ಭ ಹೀಗಿದೆ. ಬಹಳ ವರ್ಷಗಳಿಂದ ಊರ ಗುಡಿ ಬಿದ್ದುಹೋಗಿದೆ. ಅದು ಜೀರ್ಣೋದ್ಧಾರವಾಗಿಲ್ಲ. ಮಳೆಗಾಗಿ ಪ್ರಾರ್ಥನೆ, ಕುಂಭಾಭಿಷೇಕಮಾಡಿ, ವಿರಾಟಪರ್ವವನ್ನು ಓದಿಸಿದ್ದಾರೆ ಗೌಡರು. ಈಗ ಬಿದ್ದುಹೋಗಿರುವ ಗುಡಿಯನ್ನು ಮೇಲೆತ್ತಲು ಊರವರನ್ನು ಒಟ್ಟಿಗೆ ಸೇರಿಸಲು ಅಭಿಪ್ರಾಯ ಕೇಳಿದಾಗ ಪಟೇಲ ದೊಡ್ಡಲಿಂಗೇಗೌಡರು ನೂತರೆ ಕೇಡೆ ಮೊಮ್ಮಗಳೇ 'ಅಂದಂಗೆ' ಎಂದರು ಎಂಬ ಸನ್ನಿವೇಶವಿದೆ. ನೂಲುವುದರಿಂದ ಅವರಿಗಾಗಲಿ, ಇತರರಿಗಾಗಲಿ ಕೆಟ್ಟದ್ದಾಗುವುದಿಲ್ಲ. ಅದರಿಂದ ಒಳ್ಳೆಯದೇ ಆಗುತ್ತದೆ. ಎಲ್ಲರ ಮಾನ ಕಾಪಾಡುವ ನೂಲುವಿಕೆಯಿಂದ ಆಗುವ ನಷ್ಟವೇನು? ಹಾಗೆಯೇ ಗುಡಿಕಟ್ಟುವುದರಿಂದ ತನಗೂ ಇತರರಿಗೂ ಲಾಭವಿಲ್ಲದೆ ನಷ್ಟವಿಲ್ಲ ಎಂಬುದನ್ನು ಸೂಚಿಸುತ್ತದೆ.

**ವಡ್ಡನಿಗೊಂದೂರೆ ಕೊಕ್ಕರನಿಗೊಂದು ಕೆರಿಯೆ:**



ಈ ಗಾದೆ ವಡ್ಡನ ಮತ್ತು ಕೊಕ್ಕರೆಯ ಅಲೆಮಾರಿ ಬದುಕನ್ನು ಹೇಳುತ್ತದೆ. ವಡ್ಡರದು ಅಲೆಮಾರಿ ಜೀವನ. ಎಲ್ಲಿ ಕೆಲಸವೋ ಅಥವಾ ಹೊಟ್ಟೆಪಾಡಿಗೆ ದಾರಿಯೋ ಅಲ್ಲಿಯೇ ನೆಲೆಸುವುದು ಅವರ ಸ್ವಭಾವ. ಹಾಗೆಯೇ ಕೊಕ್ಕರೆ ಆಹಾರವಿರುವ ಗದ್ದೆಯನ್ನೊ ಎಷ್ಟೋ ವೇಳೆ ದೇಶದೇಶಗಳನ್ನೂ ದಾಟಿಬರುವ ಸಂಭವನೀಯತೆಯನ್ನೂ ನೋಡಿದ್ದೇವೆ. ಇದು ಅದರ ಹೊಟ್ಟೆಪಾಡಿಗೆ ಸಂಬಂಧಿಸಿದ್ದು. ಇಲ್ಲಿ ವಡ್ಡರ ಪ್ರವೃತ್ತಿಯನ್ನು ಕೊಕ್ಕರೆಯ ವಲಸೆ ಸ್ವಭಾವಕ್ಕೆ ಹೋಲಿಸಲಾಗಿದೆ.

ಊರಿನ ದೇವಸ್ಥಾನ ನಿರ್ಮಾಣ ತುರ್ತಾಗಿ ಆಗಬೇಕಾಗಿದೆ. ಇದಕ್ಕಾಗಿ ವಡ್ಡರ ನಾಗನಿಗೆ ಹೇಳಿ ಕಳುಹಿಸುತ್ತಾರೆ ಹುಚ್ಚೀರನ ಮೂಲಕ. ಊರೆಲ್ಲ ಹುಡುಕಿ ಬಂದ ಅವನಿಲ್ಲ... ಯಾವೂರಿಗ್ಹೋಗ್ಯವ್ನೋ ಯಾವ ದೇಶಕ್ಹೋಗ್ಯವ್ನೋ ವಡ್ಡನಿಗೊಂದೂರೇ ಕೊಕ್ಕರನಿಗೊಂದು ಕೆರಿಯೇ ಅಂದಂಗೆ... ಎಂದು ಹೇಳಿ ಮನೆಮಠವಿಲ್ಲದ ಒಡ್ಡ ಜೀವನೋಪಾಯಕ್ಕೆ ಅಲೆಯುವ ಬದುಕನ್ನು ಹೊಟ್ಟೆತುಂಬಿಸಿಕೊಳ್ಳಲು ವಲಸೆಹೋಗುವ ಕೊಕ್ಕರೆಗೆ ಹೋಲಿಸಿ ಬಳಸಿರುವುದು ಸಮಯೋಚಿತವಾದುದು.

**ಊರಿಗೆ ಕುಳವಲ್ಲ, ಸ್ಮಶಾನಕ್ಕೆ ಹೆಣವಲ್ಲ:**

**ಕಡಿ ಅಂದ್ರೆ ಕಪ್ಪೆಗೆ ಕ್ವಾಪ, ಬಿಡಿ ಅಂದ್ರೆ ಹಾವಿಗೆ ಕ್ವಾಪ ಅಂದಂಗೆ:**

ಮೊದಲ ಗಾದೆ ವ್ಯಕ್ತಿಯ ಅತಂತ್ರ ಸ್ಥಿತಿಯನ್ನು ತಿಳಿಸುತ್ತದೆ. ಬದುಕಿರುವಾಗಲೇ ಆಗಲಿ, ಸತ್ತನಂತರವಾಗಲಿ ಅವನ ಇರುವಿಕೆಗೆ ಒಂದು ನೆಲೆಯಿರಬೇಕು. ಮನುಷ್ಯ ಸಮಾಜಜೀವಿಯಾದರೂ ತನ್ನದೇ ಜಾತಿ, ಧರ್ಮಗಳೊಂದಿಗೆ ಇದ್ದಾನೆ. ತನ್ನ ಜಾತಿ, ಕುಳ, ದೇವರೊಂದಿಗೆ ಅವನು ಗುರುತಿಸಿಕೊಳ್ಳುತ್ತಾನೆ. ಊರಿನಲ್ಲಿ ವಾಸಮಾಡಿದರೂ ಹಲವು ದೇವರುಗಳ ಒಕ್ಕಲುಗಳೆಂದು ಗುರುತಿಸಿಕೊಂಡು ಒಂದೆಡೆ ನೀತಿ ನಿಯಮಗಳನ್ನು ರೂಢಿಸಿಕೊಂಡು ಬದುಕುತ್ತಿದ್ದಾರೆ. ಹೀಗಿರುವಲ್ಲಿ ಬೇರೆಡೆಯಿಂದ ಬಂದು ಈಗಾಗಲೇ

ನೆಲೆನಿಂತವರೊಡನೆ ಸೇರಿ ಅವರೊಳಗೊಬ್ಬರಾಗುವುದು ಗ್ರಾಮ್ಯ ಜೀವನದಲ್ಲಿ ಕಷ್ಟ. ಪರಸ್ಪರ ಹೀಯಾಳಿಸುವುದೂ ಇದೆ. ಮೂಲತಃ ಮನುಷ್ಯರೆಲ್ಲ ಒಂದೇ ಆದರೂ ಈ ಸಣ್ಣತನ ಬಿಟ್ಟುಹೋಗುವುದಿಲ್ಲ. ಹೊರಗಿನಿಂದ ಬಂದ ಕುಳವಾದವನು ಮೂಲದಿಂದ ಬಿಟ್ಟು ಬಂದ ಊರಿಗೂ ಸೇರದೆ, ಈಗ ಬಂದು ಸೇರಿರುವ ಊರಿಗೂ ಸಲ್ಲದೆ ಅತಂತ್ರ ಸ್ಥಿತಿಯಲ್ಲಿರುತ್ತಾನೆ. ಹೆಣಕ್ಕೆ ಸ್ಮಶಾನ ಸ್ಥಾನವಾಗಿ ಸಂಸ್ಕಾರ ಎಷ್ಟು ಮುಖ್ಯವೊ ಬದುಕಿರುವವನಿಗೆ ಒಂದು ಊರಿನಲ್ಲಿ ನೆಲೆ, ಮರ್ಯಾದೆ ಮುಖ್ಯ ಎಂಬ ಭಾವನೆಯಿದೆ.

ಊರಿನ ಅಣ್ಣ ತಮ್ಮತನಕ್ಕೆ ಸೇರದ ಚಾಜಗಾರ ಕುಳ ಚನ್ನಯ್ಯನದು. ಯಜಮಾನಿಕೆ ವಹಿಸುವ ದಾಸತ್ತು ಅವನ ಪಾಲಿಗೆ ಬಂದಿರಲಿಲ್ಲ. ಒಂದೊಂದು ಸಲ ಊರಿನ ಜನ ತಮಾಷೆಗಾಗಿ ಊರಿಗೆ ಕುಳವಲ್ಲ, ಸ್ಮಶಾನಕ್ಕೆ ಹೆಣವಲ್ಲ ಎನ್ನುತ್ತಿದ್ದರು. ಹೀಗಿರುವಲ್ಲಿ ಎರಡು ತೆಂಡೆಯವರಲ್ಲಿ ಜಗಳ ಬಂದರೆ ಯಾವ ಕಡೆ ಸೇರುವುದೆಂಬ ಉಭಯಸಂಕಟ ಚನ್ನನದು. ಆಗ ಕಡಿ ಎಂದರೆ ಕಪ್ಪೆಗೆ ಕ್ವಾಪ ಬಿಡಿ ಅಂದರೆ ಹಾವಿಗೆ ಕ್ವಾತ ಅಂದಂಗೆ ತನ್ನ ಬದುಕು ಎಂದುಕೊಳ್ಳುತ್ತಿದ್ದುದಾಗಿ ಆತನ ಜೀವನವನ್ನು ವರ್ಣಿಸಲಾಗಿದೆ.

ಹಾವು, ಕಪ್ಪೆ ಎರಡೂ ವೈರಿಗಳು, ಹಾವು ಕಪ್ಪೆಯನ್ನು ತಿಂದು ಜೀವಿಸುತ್ತದೆ. ಹೀಗಿರುವಾಗ ಕಚ್ಚು ಎಂದು ಹಾವಿಗೆ ಆದೇಶಿಸಿದರೆ ಅಥವಾ ಸಲಹೆಕೊಟ್ಟರೆ ಹೇಳಿದವನ ಮೇಲೆ ಕಪ್ಪೆಗೆ ಕೋಪಬರುತ್ತದೆ ಅಥವಾ ಬಿಟ್ಟುಬಿಡಿ ಎಂದಾಗ ಹಾವಿಗೆ ಕೋಪಬರುತ್ತದೆ. ಇಂತಹ ಸ್ಥಿತಿ ಊರಿಗೆ ಕುಳವಲ್ಲದ ಚನ್ನನದು. ಆತನ ಪರಿಸ್ಥಿತಿಗೆ ಈ ಗಾದೆಯ ಹೋಲಿಕೆ ಚೆನ್ನಾಗಿ ಒಪ್ಪುತ್ತದೆ.

**ಮಾಡಿದುಣ್ಣೊ ಮಾರಾಯ:**

ಇಡೀ ಸೊನ್ನೆಯಿಂದ ಸೊನ್ನೆಗೆ ಕಾದಂಬರಿ ಈ ಗಾದೆಗೆ ವ್ಯಾಖ್ಯಾನದಂತಿದೆ. ಪಾಪವಾಗಲೀ ಪುಣ್ಯವಾಗಲೀ ನಾವು ಮಾಡಿದ ಕರ್ಮದ ಫಲವನ್ನು ನಾವೇ ಅನುಭವಿಸಬೇಕು. 'ಮಾಡಿದುಣ್ಣೋ ಮಾರಾಯ' ಎಂಬ ಕಾದಂಬರಿಯನ್ನು ಎಂ.ಎಸ್.ಪುಟ್ಟಣ್ಣ ಅವರು ಬರೆದಿದ್ದಾರೆ. ನಾವು ಮಾಡಿದ ಕರ್ಮದ ಫಲಿತಾಂಶ ನಮ್ಮನ್ನೇ ಅರಸಿ ಬರುತ್ತದೆ. ಈ ಭೀತಿಯಿಂದಲಾದರೂ ಉತ್ತಮ ಕೆಲಸಗಳನ್ನು ಮಾಡಬೇಕೆಂಬ ಸೂಚನೆಯಿದೆ.

ಕಾದಂಬರಿಯಲ್ಲಿ ಜಾಜಗಾರ ಕುಳವಾದ ಚನ್ನನಲ್ಲಿಗೆ ದೇವಸ್ಥಾನದ ಜೀರ್ಣೋದ್ಧಾರಕ್ಕೆಂದು ಸಂಗ್ರಹಿಸಿದ ಹಣ, ಹರಕೆಯ ಚಿನ್ನವನ್ನು ಊರಿನ ಹಿರಿಯರು ಕಾಪಾಡಲು ಕೊಟ್ಟಿರುತ್ತಾರೆ. ಹಣದ ಮೇಲಿನ ಆಸೆಯಿಂದ ದೇವರ ದುಡ್ಡನ್ನೆಲ್ಲ ನುಂಗಿ ನೀರು ಕುಡಿದು ಕಳ್ಳತನವಾಗಿದೆ ಎಂದು ಆತ ಸುಳ್ಳು ಸುಳ್ಳೆ ಊರಿಗೆಲ್ಲ ಸುದ್ದಿ ಹಬ್ಬಿಸುತ್ತಾನೆ. ಆದರೇನು ಚನ್ನನಿಗೆ ದೇವರ ದುಡ್ಡನ್ನು ದಕ್ಕಿಸಿಕೊಳ್ಳಲಾಗುವುದಿಲ್ಲ. ಮಕ್ಕಳಿಲ್ಲದ ಚನ್ನನಿಗೆ ಮುಂದೆ ಮಕ್ಕಳಾದರೂ ಅವರ ಹಿರಿಯ ಮಗ ಮೂಡ್ಲಪ್ಪನೆಂಬುವವನು ಬರದಲ್ಲಿ ಸತ್ತುಹೋಗುತ್ತಾನೆ.

ಮತ್ತೊಬ್ಬ ಹುಟ್ಟಿದ ಆರೇ ದಿನಕ್ಕೆ ಕುರುಡನಾಗುತ್ತಾನೆ. ಹಣ ಸಿಕ್ಕ ಮೇಲೆ ಕುಂತು ಉಣ್ಣಲು ಶುರುಮಾಡಿದ ಚನ್ನನ ಕುಟುಂಬಕ್ಕೆ ಕುಡಿಕೆ ಹೊನ್ನು ಸಾಲದೆ ಕಾಲಾನಂತರ ಮನೆಯನ್ನು ಬಡತನಕ್ಕೆ ನೂಕಿ ತಾನೂ ಪ್ಲೇಗ್ ಮಾರಿಗೆ ತುತ್ತಾಗುತ್ತಾನೆ. ಇಷ್ಟಲ್ಲದೇ ಮುಂದಿನ ತಲೆಮಾರೂ ಈ ಬೇಗೆಯನ್ನು ಅನುಭವಿಸುತ್ತದೆ. ಈ ಹಿನ್ನೆಲೆಯಲ್ಲಿ ಈ ಗಾದೆಯನ್ನು ಬಳಸಿಕೊಳ್ಳಲಾಗಿದೆ.

**ಬಡವನ ಹೆಂಡತಿ ಊರಿಗೆಲ್ಲ ಅತ್ತಿಗೆ:**

ಇದು ಶೋಷಿತರ ಅವಸ್ಥೆಯನ್ನು ತಿಳಿಸುತ್ತದೆ. ಅದರಲ್ಲೂ ಅವಳು ಹೆಣ್ಣಾದರೆ? ಅತ್ತಿಗೆ ಎಂಬುದು ಒಂದು ಸಂಬಂಧ, ಸ್ಥಾನವನ್ನು ಹೇಳುವುದಕ್ಕಿಂತ ಜವಾಬ್ದಾರಿ, ಸೊಸೆಯಾದವಳ ಕೆಲಸದ ಭಾರವನ್ನು ಸೂಚಿಸುತ್ತದೆ. ಇಂತಹ ಚಿತ್ರವನ್ನು ಊರಿನ ಗಂಡು ದೇವರಿಗಾಗಲಿ ಹೆಣ್ಣು ದೇವರಿಗಾಗಲಿ ಕುಳವಲ್ಲದ ಎರಡು ಮೂರು ತಲೆಯೊಳಗೆ ಬೇರೆಡೆಯಿಂದ ಮೈಲಾರಕ್ಕೆ ಬಂದು ಸೇರಿದ ಚನ್ನನಿಗೆ ಅನ್ವಯಿಸಿ ಹೇಳಲಾಗಿದೆ. ಈತ ಒಂದೇ ಕುಳವಾದ್ದರಿಂದ ಬಹುಸಂಖ್ಯಾತ ಎರಡು ತೆಂಡೆಯೊಂದಿಗೆ ನೂತುಕೊಂಡು ಹೋಗಲು ಎಣಗಾಡುತ್ತಿದ್ದ. ಅಣ್ಣ ತಮ್ಮ ಎಂದುಕೊಂಡು ಇರುವ ಸ್ಥಿತಿಯೂ ಇತ್ತು. ಊರಿನ ಕೆಲಸಕ್ಕೆ ಇವನ ಎತ್ತುಗಾಡಿಗಳು ಒಂದೇ ಸಮನೆ ಇವನಂತೆಯೇ ಗೇಯುತ್ತಿದ್ದವು. ಈ ಸ್ಥಿತಿಯನ್ನು ಹೇಳುವಾಗ ಬಡವನ ಹೆಂಡತಿ ಊರಿಗೆಲ್ಲ ಅತ್ತಿಗೆ ಎಂಬುದನ್ನು ಸೊಸಾಗಿ ಅನ್ವಯಿಸಿದ್ದಾರೆ.

**'ಒಂದೇ ಊರಲ್ಲಿ ಹೆಣ್ಣು ತರಬಾರ್ದು.... ಒಂದು ತಿಟ್ಟಾದ್ರೂ ಮರೆಯಾಗಿರಬೇಕು'**

ಇದೇ ಭಾವವನ್ನು ಹೇಳುವ ಮತ್ತೊಂದು ಗಾದೆಯನ್ನು ಜನಪದರ ಕಟ್ಟಿದ್ದಾರೆ. ಅದು 'ಹೆಣ್ಣನ್ನು ದೂರದಿಂದ ತರಬೇಕು, ದನಾನ ಹತ್ತಿರದಿಂದ ತರಬೇಕು' – ಎಂಬುದು.

ಹೆಣ್ಣಿಗೆ ತವರು ಮನೆ ಹತ್ತಿರವಿದ್ದರೆ ಪದೇ ಪದೇ ಹೋಗಬಹುದು. ಗಂಡನ ಮನೆಯವರಿಗೆ ಇದು ಅನಪೇಕ್ಷಣೀಯ; ದುಡಿಯುವ ಸೊಸೆ ಹೋದಾಗ ಕೆಲಸಗಳು ತುಂಡಾಗುತ್ತವೆ ಎಂಬುದು ಈ ಗಾದೆಯ ಹಿಂದಿರುವ ಉದ್ದೇಶವಿರಬಹುದು. ದೂರವಿದ್ದಾಗ ಸಂಬಂಧಗಳು ಗಟ್ಟಿಯಾಗಿರುತ್ತವೆ. ಕಾದಂಬರಿಕಾರರೇ 'ಒಂದೇ ಊರಲ್ಲಿ ಹೆಣ್ಣ ತರಬಾರ್ದು' ಎಂಬುದಕ್ಕೆ "ಒಂದೂರಿಗ್ಹೆಣ್ಣ ಎಂದಿಗೂ ಕೊಡಬಾರದು. ಸಂದೆಯ ಸೊಪ್ಪು ಮಡುವಿನ ಗುಂಡಿನೀರ ತಂದಲ್ಲದವರತ್ತೆ ಕಳುವ್ಯಾಳು" ಎಂಬ ಒಂದು ಜನಪದ ಗೀತೆಯ ಸಾಲನ್ನು ಉದಾಹರಿಸುತ್ತಾರೆ. ಈ ಗಾದೆಯ ಹಿಂದಿನ ಉದ್ದೇಶ ಇದೂ ಆಗಿರಬಹುದು. ಹಾಗಾಗಿ ಕೃತಿಯಲ್ಲಿ ಹೆಣ್ಣಿಗಾಗಿ ಹುಡುಕಾಟ ನಡೆಸುತ್ತಿದ್ದ ಚನ್ನನಿಗೆ ಸರ್ವಜ್ಞ ಸಂಗಣ್ಣ ಹೇಳಿದ ಬುದ್ಧಿಮಾತಾಗಿ ಬಂದಿದೆ.

**ಹೆಣ್ಣು ಹೆತ್ತು ಅರೀತು ಎತ್ತು ಉತ್ತು ಆರೀತು:**

ಹೆಣ್ಣಿನ ಜೀವನೋತ್ಸಾಹ ಶಕ್ತಿಗೆ ಸಮಾಜ ಮನ್ನಣೆ ನೀಡುವುದು ಅನಿವಾರ್ಯವಾಗಿತ್ತು. ಈ ಮನ್ನಣೆಯಿಂದಲೂ ಮಿತಿಗಳು ಸೃಷ್ಟಿಯಾದವು ಎಂಬುದು ನಿಜವಾದರೂ ಈ ಮಾನ್ಯತೆ

ಆಳವಾಗಿ ಸಮಾಜದಲ್ಲಿ ಬೇರೂರಿರುವುದೂ ನಿಜ. ಹೆಂಗಸಿಗೆ ಹೆತ್ತಲ್ಲದೆ ಬುದ್ಧಿ ಇಲ್ಲ ಎಂಬುದನ್ನು ಮಾಪನವನ್ನಾಗಿ ಬಳಸಲಾಯಿತು ತಾಯ್ತನವನ್ನು ಹೆಣ್ತನದೊಂದಿಗೆ ಸಮೀಕರಿಸುತ್ತಿದ್ದ ಸಮಾಜ ಬಂಜೆಯರ ಬದುಕನ್ನು ಹಲವು ರೀತಿಯಲ್ಲಿ ವ್ಯರ್ಥವೆಂದಿತು. ಹೆಣ್ಣು ಹೆತ್ತಾಗ ತಾಯ್ತನ ಅಥವಾ ಹೆಣ್ತನ ಸಂಪೂರ್ಣ. ಹಾಗೆಯೇ ಎತ್ತು ಹೊಲ ಉತ್ತಾಗ ಅದರ ಜನ್ಮ (ಜೀವಿತ) ಸಾರ್ಥಕ. ಎತ್ತಿಗೆ ದುಡಿಮೆಯನ್ನು ಮಾಪನವನ್ನಾಗಿ ಮಾಡಲಾಗಿದೆ. ಕೃತಿಯಲ್ಲಿ ನವವಧುವಾದ ಚೌಡಿಯ ತಲೆಯ ಹೇನು ಕುಕ್ಕುತ್ತ ಬುದ್ಧಿ ಮಾತನ್ನು ಹೇಳುತ್ತಿದ್ದ ಗೌಡರ ಹೆಂಡತಿ "ಎಷ್ಟು ಹೇಳಿದರೂ ಅಷ್ಟೆಯ..... ಹೆಂಗಸಿಗೆ ಒಂದು ಮಗುವಾಗೋ ತನಕ... ಕಷ್ಟ ಸುಖ ಅರಿಯಬೇಕಾದರೆ ಹೆಣ್ಣು ಹೆತ್ತು ತೀರಬೇಕು" ಎನ್ನುತ್ತಾಳೆ.

**ಎರಡು ಕಣಕಾದು ದಾಸಯ್ಯ ಕೆಟ್ಟ:**

ಸುಗ್ಗಿ ಕಾಲದಲ್ಲಿ ರೈತರು ಅವರವರ ಕಣದಲ್ಲಿ ಒಕ್ಕಣೆ ಮಾಡುವಾಗ ವಾಡಿಕೆಯಂತೆ ದಾಸಯ್ಯಗಳು ತಮ್ಮ ಪಾಲಿನ ಧಾನ್ಯಕ್ಕಾಗಿ ಕಣದ ಬಳಿ ಬರುತ್ತಾರೆ. ಒಕ್ಕಣೆ ಮುಗಿದ ಮೇಲೆ ರೈತಮಕ್ಕಳು ಒಂದು ಹೊರೆ ಇಲ್ಲವೆ ಒಂದಷ್ಟು ದವಸ ಕೊಡುವ ಪದ್ಧತಿಯಿದೆ. ಏಕಕಾಲದಲ್ಲಿ ಎರಡು ಮೂರು ಕಡೆ ಧಾನ್ಯ ಸಂಗ್ರಹಿಸುವ ಆಸೆಯಿಂದ ಅಲ್ಲಿ-ಇಲ್ಲಿ ಅಡ್ಡಾಡುತ್ತ ಕಡೆಗೆ ಒಂದು ಕಡೆಯೂ ಧಾನ್ಯ ದಕ್ಕದ ಸ್ಥಿತಿಗೆ ಒಳಪಡುತ್ತಾರೆ. ಇದನ್ನೇ 'ಎರಡು ಕಣ ಕಾದು ದಾಸಯ್ಯ ಕೆಟ್ಟ' ಎನ್ನುತ್ತಾರೆ. ಮಲ್ಲೇಗೌಡರ ಹೊಲ ಕಾಯುತ್ತಿದ್ದ ಚನ್ನನನ್ನು ಪಟೇಲ ಕುಳ್ಳೇಗೌಡರು ಸಂಬಳದ ಮೇಲೆ ಮನೆಕೆಲಸಕ್ಕೆ ಕರೆಯುತ್ತಾರೆ. ಮೊದಲೇ ಹೇಗೋ ದುಡಿದುಕೊಂಡಿದ್ದ ಚನ್ನ ಪಟೇಲರ ಮನೆಗೆ ಬಂದು ಕಳ್ಳತನದ ಆರೋಪ ಹೊತ್ತು ಅವರ ಮನೆಯಿಂದಲೂ ಹೊರಬರಬೇಕಾಗುತ್ತದೆ. ಆಗ ಚನ್ನನ ಸ್ಥಿತಿ ನೋಡಿ ಎಲ್ಲು ಸಲ್ಲದವನಾದ ಅವನಿಗೆ ಈ ಗಾದೆಯನ್ನು ಅನ್ವಯಿಸಲಾಗಿದೆ.

**ಕೈತೂಕ ಬಾಯಿಬಣ್ಣ:**

ತಕ್ಕಡಿ ಇಲ್ಲದೆ ಕೈಯಲ್ಲಿ ಹಿಡಿದು ತೂಕ ಇಷ್ಟು ಎಂದು ಅಂದಾಜು ಮಾಡಿ ಹೇಳುವುದು ಹಾಗೂ ಮಾತಿನ ಮೋಡಿಮಾಡಿ ಅದಕ್ಕೆ ಬಣ್ಣ ಕಟ್ಟುವುದಕ್ಕೆ 'ಕೈತೂಕ ಬಾಯಿ ಬಣ್ಣ' ಎಂಬ ಗಾದೆ ಹುಟ್ಟಿಕೊಂಡಿದೆ. ಹಿಂದೆ ಸಾಬರು ರೇಷ್ಮೆ ಗೂಡುಗಳನ್ನು ಹಳ್ಳಿಯ ಜನರಿಂದ ತೆಗೆದುಕೊಂಡು ಹೋಗುವಷ್ಟು ರೀತಿಯನ್ನು ಹೇಳುತ್ತಾ ಈ ಗಾದೆಯನ್ನು ಉದಾಹರಿಸಿದ್ದಾರೆ. ಅಂದರೆ 'ಮೋಸದ ವ್ಯಾಪಾರ' ಎಂದರ್ಥ. ಇಂತಹ ವ್ಯಾಪಾರದಲ್ಲಿ ಮಾತುಗಾರಿಕೆಯೇ ಹೆಚ್ಚು. ಹಾಗಾಗಿ 'ಬಾಯಿಬಣ್ಣ' ಎನ್ನಲಾಗಿದೆ.

**ಅಟ್ಟಮೇಲೆ ಒಲೆ ಉರಿಯಿತು, ಕೆಟ್ಟ ಮೇಲೆ ಬುದ್ಧಿ ಬಂತು:**

'ಅಟ್ಟಮೇಲೆ' ಎಂದರೆ 'ಅಡುಗೆ ಆದ ಮೇಲೆ' ಎಂದರ್ಥ. ಹಾಳಾದ ಮೇಲೆ ತಿಳಿವಳಿಕೆ ಬಂತು ಎಂಬುದನ್ನು ತಿಳಿಸಲು ಕಟ್ಟಿದ ಗಾದೆ ಇದು. ದಪ್ಪ (ಸೀಳು)ಸೌದೆಗಳು ಹೊತ್ತಿಕೊಳ್ಳಬೇಕಾದರೆ ಒತ್ತು ಕೊಟ್ಟು ಪುಳ್ಳೆ, ತರಗು ಹಾಕಿ ಉರಿಸಬೇಕು. ಅದರ ಕಾವಿನಿಂದ

ಸೌದೆ ಶಾಖವೇರುವ ವೇಳೆಗೆ ಒಮ್ಮೊಮ್ಮೆ ಅಡುಗೆಯೇ ಆಗಿರುತ್ತದೆ. ಆ ವೇಳೆಗೆ ಒಲೆ ಉರಿಯಲಾರಂಭಿಸುತ್ತದೆ. ತಿಳಿವಳಿಕೆ ಎಂಬುದು ಪ್ರತಿದಿನವೂ ಹೊಸದಾಗಿಯೇ ಇರುತ್ತದೆ. ಗೊತ್ತಿಲ್ಲದ ಗೋಜಿಗೆ ಸಿಲುಕಿ ಕಷ್ಟ ಅನುಭವಿಸಿದ ಮೇಲೆ ಹಾಗೆ ಮಾಡಬಾರದಿತ್ತು, ಹೀಗೆ ಇರಬೇಕಾಗಿತ್ತು ಎಂಬ ಪಶ್ಚಾತ್ತಾಪ ಉಂಟಾಗುತ್ತದೆ. ಇದನ್ನೇ 'ಅಟ್ಟಮೇಲೆ ಒಲೆ ಉರಿಯಿತು, ಕೆಟ್ಟ ಮೇಲೆ ಬುದ್ಧಿ ಬಂತು' ಎಂದು ಹೇಳಲಾಗಿದೆ. ತಮ್ಮ ಮನೆ ಮತ್ತು ಪಟೇಲ ಕುಳ್ಳೇಗೌಡರ ಮನೆಯಿಂದ ಹೊರಬಿದ್ದು ಬೀದಿ ಅಲೆಯುತ್ತಿದ್ದ ಚನ್ನನ ಬಗ್ಗೆ ಮಲ್ಲೇಗೌಡರು ಅಂದುಕೊಳ್ಳುವ ಮಾತಿನಲ್ಲಿ ಈ ಗಾದೆ ವ್ಯಕ್ತವಾಗಿದೆ.

**ದಾಸಯ್ಯ ಎತ್ತೋ ದನಕರು ಎತ್ತೋ**

'ಎಲ್ಲ ಜೋಗಿ ಅಂದ್ರೆ ಕಡಾಸು ಕಂಕ್ಳಲ್ಲಿ ಅದೆ ಅಂದ್ನಂತೆ' ಎಂಬ ಗಾದೆಯಿದೆ. ಕಡಾಸು ಎಂದರೆ ಶಂಕು,[೧] ಜಾಗಟೆ,[೨] ಭುವನಾಸಿ[೩] ಇವುಗಳನ್ನು ಸೇರಿಸಿ ಮಾಡಿದ ಹೆಗಲ ಹೊರೆ. ಇದಲ್ಲದೆ ಕೈಯಲ್ಲಿ 'ಗರುಡಗಂಭ'[೪] ಹಿಡಿದಿರುತ್ತಿದ್ದನು – ಸಾಮಾನ್ಯವಾಗಿ ಈ ವಸ್ತುಗಳನ್ನೆಲ್ಲ ಕಂಚಿನಿಂದ ಮಾಡಿರುತ್ತಿದ್ದರು. ಈ ಹೊರೆ ಎತ್ತು(ದನ) ಹೊರುವಷ್ಟು ಭಾರವಾಗಿರುತ್ತಿತ್ತು. ಆ ಕಾರಣದಿಂದ 'ದಾಸಯ್ಯ ಎತ್ತೋ ದನಕರ ಎತ್ತೋ' ಎಂದು ಜನರು ತಮಾಷೆಯಾಗಿ ಮಾತಾಡಿಕೊಳ್ಳುತ್ತಿದ್ದರು. ಭಾರವಾದ ಹೊರೆಯನ್ನು ಮತ್ತೊಬ್ಬರ ಸಹಾಯದಿಂದ ಹೊರಬೇಕಾದ ಪರಿಸ್ಥಿತಿಯಿರುತ್ತದೆ. ಆ ವೇಳೆಯಲ್ಲಿ ದಾರಿಯಲ್ಲಿ ಬರುವ ದಾಸಯ್ಯನನ್ನು ಏನಾದರು ಹೊರಿಸಲು ಕೇಳಿದರೆ– ಅವನು ನನ್ನದೇ ನನಗೇ ಭಾರ ಎನ್ನುವುದಕ್ಕೆ 'ಕಡಾಸು ಕಂಕ್ಳಲ್ಲಿ' ಎಂದನಂತೆ– ಕಡಾಸಿನ ಮಣಭಾರದ ಕಾರಣಕ್ಕೆ ದಾಸಯ್ಯ ಎತ್ತೋ ದನಕರ ಎತ್ತೋ ಎಂಬ ಗಾದೆ ಹುಟ್ಟಿದೆ.

**೬.೨. ಬೈಗುಳಗಳು**

ಮನುಷ್ಯನ ಮಾನಸಿಕ ಉದ್ವಿಗ್ನತೆ, ಕೋಪ, ಅಸಹಾಯಕತೆ, ಕೀಳರಿಮೆ, ಮೇಲರಿಮೆ, ಶಾಬ್ದಿಕ ದಬ್ಬಾಳಿಕೆ ಮಾತಿನಿಂದ ವ್ಯಕ್ತವಾದರೆ ಅದು 'ಬೈಗುಳ' ಎನಿಸಿಕೊಳ್ಳುತ್ತದೆ. ಇವು ತಲೆಮಾರಿನಿಂದ ತಲೆಮಾರಿಗೆ ವಾಕ್ಪರಂಪರೆಯಿಂದ ಸಾಗಿಬರುತ್ತವೆ. ಮಾತಿನ ನಡುವೆ ಕಂಡುಬರುವ ಇವು ಕೆಲವು ಬಾರಿ ಕಾವ್ಯಮಯವಾಗಿರುತ್ತವೆ. ಕಣ್ಣಿಗೆ ಕಟ್ಟುವ ಅನೇಕ ಭಯಂಕರ ಚಿತ್ರಗಳನ್ನು ಸೃಷ್ಟಿಸುವ ಇವುಗಳಿಂದ ಅಥವಾ ಇವುಗಳ ಪ್ರಯೋಗದಿಂದ ಬಯ್ಯುವವನ ಕೋಪತಾಪ ತಾತ್ಕಾಲಿಕವಾಗಿಯಾದರೂ ಶಮನವಾಗುತ್ತದೆ. ಸ್ನೇಹಿತರ ನಡುವೆ

---

೧. ಶಂಖ – ಸಮುದ್ರದಲ್ಲಿ ಸಿಗುವ ಒಂದು ಬಗೆಯ ವಾದ್ಯ.

೨. ಜಾಗಟೆ – ಜಯಗಂಟೆ; ಇದೊಂದು ಮಂಗಳವಾದ್ಯ

೩. ಭು(ಭ)ವನಾಸಿ – ಎಂದರೆ ಪಾತ್ರೆ; ದಾಸಯ್ಯಗಳು ಉಪಯೋಗಿಸುವ ಭಿಕ್ಷಾಪಾತ್ರೆ.

೪. ಗರುಡಗಂಭ – ಎಂದರೆ ದಾಸಯ್ಯನು ಕೈಯಲ್ಲಿ ಹಿಡಿದಿರುವ 'ದೀವಟಿಗೆ'.

ಪ್ರೀತಿ, ತಮಾಷೆಗಾಗಿ ಬೈಯುವ ಬೈಗುಳ ತಪ್ಪು ಮಾಡಿದಾಗ ಹಿರಿಯರು ಕಿರಿಯರಿಗೆ ಬೈಯುವ ಬೈಗುಳಗಳೂ ಇವೆ. ಬೈಗುಳಗಳು ಪಂಪ, ಕುಮಾರವ್ಯಾಸ, ಅಂಬಿಗರ ಚೌಡಯ್ಯ ಮೊದಲಾದವರ ಕೃತಿಗಳಲ್ಲಿ ಅಧಿಕವಾಗಿ ಬಳಸಲ್ಪಟ್ಟಿವೆ. ಬೈಗುಳಗಳೇ ಹೆಂಗಸರಿಗೆ ಜಗಳದಲ್ಲಿ ಆಯುಧಗಳು. ಹಲವು ಸಂದರ್ಭಗಳಲ್ಲಿ ಸುಂದರ ರೂಪಕಗಳಾಗಿರುವ ಇವು ಹಿಂದಿನ ಕಾಲದ ಪದ್ಧತಿ, ನಂಬಿಕೆ, ಶಿಕ್ಷೆ, ಸಮಾಜಿಕ ನಡವಳಿಕೆಗಳನ್ನು ಪ್ರತಿಬಿಂಬಿಸುತ್ತವೆ.

ಸ್ವಾರಸ್ಯಕರವಾದ ಸಂಗತಿಎಂದರೆ ಪ್ರಸ್ತುತ 'ಸೊನ್ನೆಯಿಂದ ಸೊನ್ನೆಗೆ' ಕಾದಂಬರಿಯ ಉಗಮಕ್ಕೆ ಒಂದು ಬೈಗುಳ ಕಾರಣವಾಗಿರುವುದು. ''ಬಯಲು ಸೀಮೆಯ ಗ್ರಾಮಾಂತರ ಪ್ರದೇಶದಲ್ಲಿ ಯಾರನ್ನಾದರೂ ಬಯ್ಯಬೇಕಾದರೆ ನಿನ್ನ ಮನೆ ಧೂಪದ ಚನ್ನನ ಮನೆಯಂಗೆ ಗುಡಿಸಿ ಗುಂಡಾಂತರಾಗ'' ಎಂಬ ಮಾತನ್ನು ಬಳಸಿ ಬಯ್ಯುತ್ತಾರೆ.[೧] ಶ್ರೀ ಕೆ.ಸಿ.ವೀರೇಗೌಡ ಎಂಬವರು ಲೇಖಕರಿಗೆ ಹೇಳಿದ ಕತೆ ಧೂಪದ ಚನ್ನನ ಕಥೆಯನ್ನೆ ಹೋಲುತ್ತಿದುದರಿಂದ ಆತನೊಬ್ಬ ಐತಿಹಾಸಿಕ ವ್ಯಕ್ತಿಯಾಗಿರಬೇಕೆಂದು ಆ ಬೈಗುಳವನ್ನು ಸಂಶೋಧನೆ ಮಾಡಿದಾಗ ನಾಗೇಗೌಡರಿಗೆ ಈ ಕಥೆ ಹಾಗೂ ಗಾದೆಯ ಬಗೆಗೆ ಮಾಹಿತಿ ದೊರೆತಿದೆ.

'ಅವರ ಮನೆ ಮಂಡೆ ಮಾಸ್ಹೋಗ'

ದ್ಯಾವರು ಗಂಟುತಿಂದೋನ ಮನೆ ಎಕ್ಕುಟ್ಹೋಗ್ಲಿ.... ಅವರ ಮನೆ ಹಾಳಾಗ್ಹೋಗ್ಲಿ (ಪು.೨೮)

'ನನ್ನಾಟಕಳ್ಳ' (ಪು. ೭೧)

ಇವನ ವಂಶ ಹಾಳಾಗ'

'ದೇವರ ಗಂಟುತಿಂದೋರ್ಮನೆ ಗುಡಿಸಿ ಗುಂಡಾಂತರಾಗ್ಲಿ' (ಪು. ೧೬೩)

'ಅಯ್ಯೋ ವಂಶ್ಹಾಳಾ' (ಪು. ೧೯೪)

ನಿನ್ನ ಮಗನ್ನ ತಿನ್ನ..... ನಿನ್ನ ಹೆಂಡರ ತಿನ್ನ..... (ಪು. ೨೦೧)

'ದ್ಯಾವರ ಗಂಟು ತಿಂದೋನ ಮನೆ ಎಕ್ಕುಟ್ಹೋಗ್ಲಿ....... ಅವರ ಮನೆ ಹಾಳಾಗ್ಲಿ..

ದೇವಸ್ಥಾನದ ಜೀರ್ಣೋದ್ಧಾರಕ್ಕೆಂದು ಸಂಗ್ರಹಿಸಿ ಜೋಪಾನವಾಗಿಡಲು ಕೊಟ್ಟಿದ್ದ ಹಣವನ್ನು ಚನ್ನಯ್ಯನು ಯಾವುದೇ ತೊಕ್ಕು ಕೊಡದೆ ಲಪಟಾಯಿಸಿದ್ದಕ್ಕೆ ಊರ ಜನ ಅವನಿಗೆ ಹಾಕಿ ಶಾಪ, ಬೈದ ಬೈಗುಳ ಇದು.

**ಎಕ್ಕುಟ್ಹೋಗ್ಲಿ–** ''ಎಕ್ಕ ಹುಟ್ಟಿ ಹೋಗಲಿ' – ಅಂದರೆ ಎಕ್ಕದ ಗಿಡ ಬೆಳೆಯುವುದು ಎಂದರ್ಥ. ಪಾಳುಭೂಮಿ ಅಥವಾ ಪಾಳುಮನೆಯಲ್ಲಿ ಎಕ್ಕದ ಗಿಡ ಹುಟ್ಟಿತೆಂದರೆ ಆ ಮನೆ ನಾಶವಾಯಿತೆಂದೇ ಅರ್ಥ.

೧. ಸೊನ್ನೆಯಿಂದ ಸೊನ್ನೆಗೆ, ಮುನ್ನುಡಿಯಿಂದ.

**ನನ್ನಾಟಕಳ್ಳ–** ಹಾಟು ಎಂದರೆ ಹೆಂಗಸರ ಮುಟ್ಟು. ಆಟುಗಳ್ಳ ಎಂಬುದು 'ಲಫಂಗ', 'ಪೋಲಿ', ಎಂಬ ಬೈಗುಳವಾಗಿದೆ.

**ವಂಶಹಾಳಾಗ;** ಎಂಬುದು ಯಾವನೋ ಒಬ್ಬವ್ಯಕ್ತಿ ತಪ್ಪು ಮಾಡಿದ್ದರೂ ಅವನೂ ಸೇರಿದಂತೆ ಅವನ ವಂಶವೂ ನಾಶವಾಗಲಿ ಎಂದು ಬೈಯ್ಯುವುದು. ವಂಶದ ಉದ್ಧಾರಕ್ಕಾಗಿಯೇ ತಪ್ಪೆಸಗುವವನಿಗೆ ಇನ್ನಷ್ಟು ಮಾರ್ಮಿಕವಾದ ಮಾತುಗಳಾಗುತ್ತವೆ.

**'ಗುಡಿಸಿ ಗುಂಡಾಂತರಾಗ:** ಎಂಬುದು 'ಹಾಳಾಗು' ಎಂಬ ಅರ್ಥವನ್ನೇ ಸ್ಫುರಿಸುತ್ತದೆ. ಗುಡಿಸುವುದು, **'ಸ್ವಚ್ಛತೆ'**ಗಿಂತ ಪೂರ್ತಿನಾಶ ಎಂಬುದನ್ನು ಸೂಚಿಸುತ್ತದೆ.

**ಮಗನ್ನ ತಿನ್ನ:ಹೆಂಡತಿ ತಿನ್ನ:** ತಿನ್ನ, ತಿನ್ಕೋಳ ಎಂದರೆ **'ನಾಶ'** ಅಥವಾ **'ಸಾಯುವುದು'** ಎಂದರ್ಥ. ಮಗನ ತಿನ್ನ ಎಂದರೆ ತಂದೆ ತಾಯಿ ಬದುಕಿರುವಾಗಲೇ ಅವರ ವಂಶೋದ್ಧಾರಕ ಪುತ್ರನ ಸಾವಾಗಲೀ ಎನ್ನುವ ಅರ್ಥದ ಬೈಗುಳ. ಅಲ್ಲದೆ ಹೆಂಡತಿ ತಿನ್ನ ಎಂಬುದೂ ಇದೇ ಅರ್ಥವನ್ನು ಧ್ವನಿಸುತ್ತದೆ. ಏಕೆಂದರೆ ಹೆಂಡತಿಯೂ ಸತ್ತು ಹೋದರೆ ಇನ್ನು ವಂಶೋದ್ಧಾರಕ ಹುಟ್ಟುವುದಾದರೂ ಹೇಗೆ? ಹಾಗಾಗಿ ಈ ಎರಡೂ ಬೈಗುಳಗಳು ವಂಶನಾಶವಾಗಲಿ ಎಂಬರ್ಥದಲ್ಲಿ ಪ್ರಯೋಗವಾಗುತ್ತವೆ.

ತಲೆಮಾರಿನಿಂದ ತಲೆಮಾರಿಗೆ ವಾಕ್ಪರಂಪರೆಯಿಂದ ಸಾಗಿಬರುವ ಬಯ್ಗುಳಗಳ ವಾಚ್ಯಾರ್ಥಕ್ಕಿಂತ ಸಾಂದರ್ಭಿಕ ಮತ್ತು ನಿಯೋಗಾತ್ಮಕ ಅರ್ಥಗಳೇನೆಂಬುದನ್ನು ತಿಳಿಯುವುದು ವಿಶೇಷವಾಗಿದೆ. ಯಾರು ಯಾರಿಗೆ ಯಾವ ಸಂದರ್ಭದಲ್ಲಿ ಬಯ್ಯುತ್ತಿದ್ದಾರೆಂಬುದನ್ನು ಆಧರಿಸಿ ಅವುಗಳ ಸಾಂದರ್ಭಿಕ ಅರ್ಥ ವ್ಯತ್ಯಾಸಗೊಳ್ಳುತ್ತಾ ಹೋಗುತ್ತದೆ.

ಬೈಗುಳ ಕೇವಲ ಗ್ರಾಮೀಣ ಪ್ರದೇಶಕ್ಕೆ ಮಾತ್ರ ಸೀಮಿತವಾಗಿಲ್ಲ. ನಗರಗಳಲ್ಲೂ ಅದರ ದನಿಯಿದೆ. ಪ್ರದೇಶ ಹಾಗೂ ಜಾತಿಭೇದವಿಲ್ಲದೆ ಎಲ್ಲೆಡೆ ಸಂಚರಿಸುವ ಇವು ಮನುಕುಲದ ಜೊತೆ ಜೊತೆಗೆ ಸಾಗಿ ಮುಂದೆಯೂ ಉಳಿದು ಬರುವಂಥವು. ಇವು ಜಾನಪದದ ಜೀವಂತಿಕೆಗೆ ಸಾಕ್ಷಿಯಾಗಿವೆ.

ಹಿರಿಯರು ಕಿರಿಯರನ್ನು ಬೈದರೆ 'ಬೈಯ್ತ ಹೇಳೋರು ಬದುಕೋಕೆ ಹೇಳಿದ್ರು...' ಎನ್ನುವ ಸಮರ್ಥನೆಗಾಗಿ ಬೈಗುಳಗಳನ್ನು ಬೆಂಬಲಿಸುವ ಗಾದೆಯೇ ಇದೆ. ಒಟ್ಟಾರೆ ಬೈಗುಳಗಳ ಉದ್ದೇಶ ನೋವುಂಟು ಮಾಡುವುದು. 'ಬರಗಾಲ್ದಲ್ಲಿ ಒಳ್ಳೆ ಊಟ ಸಿಗಲ್ಲ, ಜಗಳ್ದಲ್ಲಿ ಒಳ್ಳೆ ಮಾತು ಸಿಗಲ್ಲ' ಎಂಬುದೊಂದು ಗಾದೆ. ಜಗಳದಲ್ಲೇನು ಹಾಲುತುಪ್ಪವೆ? ದಂಡಿನಲ್ಲಿ ಸೋದರಮಾವನೇ? ಎಂಬಂತೆ ಇದರಲ್ಲಿ ಸೊಗಸೇನು? ಮಾತು ಬಂದಾಗ ಮುಖನೋಡೋದೆ? ಎಲ್ಲವನ್ನೂ ಆಡಿ ಮುಗಿಸುವುದು.

## ೬.೩. ಸ್ಥಳನಾಮ, ವ್ಯಕ್ತಿನಾಮ, ಅಡ್ಡಹೆಸರುಗಳು

ನಾಡಿನ ಸಾಂಸ್ಕೃತಿಕ, ಐತಿಹಾಸಿಕ ಅಧ್ಯಯನಕ್ಕೆ ಒಂದು ಕೃತಿಯ ಜಾನಪದೀಯ ಅಧ್ಯಯನಕ್ಕೆ ಸ್ಥಳನಾಮಗಳು, ವ್ಯಕ್ತಿನಾಮಗಳು ವಿಶಿಷ್ಟ ಸಾಮಗ್ರಿಯನ್ನು ಒದಗಿಸುವ ಆಧಾರಗಳು. ಸ್ಥಳನಾಮಗಳು ಭಾಷಾವಿಜ್ಞಾನಿಗಳ ಗಮನಸೆಳೆದಿರುವ ಮಹತ್ವಪೂರ್ಣ ಅಭ್ಯಾಸದ ಅಂಶಗಳಾಗಿವೆ. ಊರುಗಳ ಹೆಸರುಗಳಲ್ಲಿ ಹುದುಗಿರುವ ವಿಶೇಷತೆಯನ್ನು ಗುರುತಿಸುವಲ್ಲಿ ಭಾಷಾ ವಿದ್ವಾಂಸರೇ ಮೊದಲಿಗರಾಗಿದ್ದಾರೆ.

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಭಾಷಾವೈಜ್ಞಾನಿಕ ದೃಷ್ಟಿಯಿಂದ ಕನ್ನಡನಾಡಿನ 'ಹೆಸರು'ಗಳ ವ್ಯವಸ್ಥಿತ ಅಭ್ಯಾಸ ಮಾಡಿದ ಕೀರ್ತಿ ಡಾ. ಆರ್.ಸಿ.ಹಿರೇಮಠ ಅವರಿಗೆ ಸಲ್ಲುತ್ತದೆ. ಶಂಭಾಜೋಶಿ ಅವರೂ ಕರ್ನಾಟಕದ ಕೆಲವು ಊರುಗಳ ಹೆಸರುಗಳ ವಿವರಗಳನ್ನು ತಾರ್ಕಿಕವಾಗಿ ನಿರೂಪಿಸಿದ್ದಾರೆ. ಇದರ ಬಗೆಗೆ ಇನ್ನೂ ಹೆಚ್ಚಿನ ಶಾಸ್ತ್ರೀಯ ಅಧ್ಯಯನದ ಅವಶ್ಯಕತೆಯಿದೆ.

ಒಂದು ಕಾಲಕ್ಕೆ ತನ್ನ ಮೇಲೆ ಗಾಢವಾದ ಪರಿಣಾಮವನ್ನುಂಟು ಮಾಡಿದ ವಸ್ತು, ವ್ಯಕ್ತಿ, ಘಟನೆಗಳನ್ನು ಧರ್ಮ, ಸಂಸ್ಕೃತಿಯ ಹಿನ್ನೆಲೆಯಲ್ಲಿ ತಾನು ವಾಸಿಸುವ ಸ್ಥಳಗಳಿಗೆ ಹೆಸರಿಸಿ ಮಾನವನು ತನ್ನ ಉತ್ಕಟ ಭಾವನೆಗಳನ್ನು ವ್ಯಕ್ತಪಡಿಸಿದ್ದಾನೆ.

ಕಾದಂಬರಿಯ ವಸ್ತುವಿಚಾರ ೧೫೦ ವರ್ಷದ ಹಿಂದಕ್ಕೆ ಹೋದರೂ ಇದರಲ್ಲಿ ಬರುವ ಸ್ಥಳನಾಮಗಳು ಇಂದಿಗೂ ಜೀವಂತವಾಗಿವೆ. ಇಲ್ಲಿ ಬಳಕೆಯಾಗಿರುವ ಸ್ಥಳನಾಮಗಳು ಕತೆಗೆ ತುಳುಕುಹಾಕಿಕೊಂಡು ಬೆಳೆದಿವೆ.

'ಎದೆ ಏಳಂದೂರು ನಾಲಗೆ ನರಸೀಪುರ ನಮ್ಮ ದೊಡ್ಡ ನಾಗೇಗೌಡರಿಗೆ' ಎಂಬಲ್ಲಿ ಎದೆಯಲ್ಲಿರುವುದು ಒಂದು, ನಾಲಗೆ ಹೇಳುವುದು ಇನ್ನೊಂದು ಎಂದು ಅರ್ಥಬರುತ್ತದೆ. ಹಾಗಾಗಿ ವ್ಯಕ್ತಿಯ ಸ್ವಭಾವವನ್ನು ಈ ಮಾತು ಹೇಳಿತ್ತದೆ.

ಚನ್ನ ಮದುವೆಯಾಗಲು ಹೆಣ್ಣನ್ನು ಹುಡುಕುವುದಕ್ಕೆ ಮೊದಲು ಹಿರೀಕರ ಸಲಹೆ ಕೇಳಿದಾಗ ಅವರು ಸುತ್ತಮುತ್ತ ಇರುವ ಊರುಗಳ ಬಗ್ಗೆ ತಮ್ಮದೇ ಆದ ಹಿನ್ನೆಲೆಯನ್ನು ಹೇಳುತ್ತಾರೆ.

**ಕಲ್ಕೆರೆಗೆ**: 'ಕಷ್ಟವಿದ್ದೆ ಕಲ್ಹೊರಾಕೆ ಕಲ್ಕೆರೆ ಅಂತ ಹೆಸರಾಗದೆ'

**ಬಳ್ಳೇಕೆರೆ:** 'ಬಿಸಿನೀರು ಮಾರಿದ ಬಳ್ಳೇಕೆರೆ ಅಂತ ಲೋಕವೇ ಹೇಳ್ತದೆ'

**ಬಮ್ಮನಹಳ್ಳಿ**– 'ಬಂದ ನಂಟ್ರ ಬಾಗಲಲ್ಲಿ ನಿಲ್ಲಿಸೋ ಬಮ್ಮನಹಳ್ಳಿ'

**ಚಿಕ್ಕಬಮ್ಮನಹಳ್ಳಿ**– ಬಕ್ಕತಲೆ ಚಿಕ್ಕಬಮ್ಮನಹಳ್ಳಿ ಅಂತಲೇ ಹೆಸರಾಗದೆ. 'ತಲೆಗೆ ಬಟ್ಟಿಲ್ದ ನನ್ನ ಮಗ' ಅನ್ನೋಕಿಲ್ವೇನೋ..... ಹಾಗೆ.

**ತೂಬಿನಕೆರೆ:** 'ತಲೆಕೆಳಗಿನ ನ್ಯಾಯ ಆಡೋ ತಾಯ್ಗಂಡ ನೂರು ತೂಬಿನಕೆರೆ'

**ಕೂಚಳ್ಳಿ:** ''ಒಣಮರಕ್ಕೆ ಹನ್ನೆರಡು ಸಾವಿರ ಹಣ ತೆತ್ತೂರು ಅದು. ಜಗಳಗಂಟಿ ಊರು, ಕೂಚಳ್ಳಿಯೋ ನೀಚಳ್ಳಿಯೋ ಅಂತ ಅಂತಾರೆ ಜನ.''

ಹಳ್ಳಳ್ಳಿ, ಕೈವಾರ, ವಡಕೇಗಟ್ಟ, ಹೊನ್ನಾಯ್ಕನಪುರ– ಊರುಗಳಿಗೆ.

''ಕೋಳಿಗೆ ಹಳ್ಳಳ್ಳಿ, ಕ್ವಾಷ್ಟಕೆ ಕೈವಾರ, ಕೊಟ್ಣಕೆ ವಡಕೆಗಟ್ಟು, ಮಕ್ಕರಿ ಹೆಣದು ಮಕ್ಕಳ ಸಾಕಾಕೆ ಹೊನ್ನಾಯ್ಕನಪುರ''

ಊರಿನ ಬಗೆಗಿನ ಇರುವ ಅಭಿಪ್ರಾಯ ಭೇದಗಳು ಆ ಊರಿನ ಜನರ ಸಂಸ್ಕೃತಿ, ಸ್ವಭಾವ, ವೈಯಕ್ತಿಕ ಭಾವನಗಳೂ ಆಗಿರಬಹುದು. ಕೆಲವೊಮ್ಮೆ ಸಾರ್ವತ್ರಿಕ ಅನಿಸಿಕೆಗಳು ವೈಯಕ್ತಿಕವಾಗಿ ಹೊರಹೊಮ್ಮುತ್ತವೆ. ಲೇಖಕರು ಸ್ಥಳೀಯ ಐತಿಹ್ಯ ಸ್ಥಳ ಪುರಾಣಗಳನ್ನು ಕ್ವಚಿತ್ತಾಗಿಯಾದರೂ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಇಂತಹವು ಪ್ರತಿಯೊಂದು ಪ್ರದೇಶಗಳಲ್ಲಿಯೂ ದೊರೆಯುತ್ತವೆ. ಭಾಷಾವಿಜ್ಞಾನಿಗಳಿಗೆ, ಇತಿಹಾಸಕಾರರಿಗೆ ಈ ಬಗೆಯ ವಿವರಗಳು ಸಂಶೋಧನೆಗೆ ಅನುವು ಮಾಡಿಕೊಡುತ್ತವೆ.

**ವ್ಯಕ್ತಿನಾಮಗಳು ಮತ್ತು ವ್ಯಕ್ತಿ ವಿವರಗಳು**

ವ್ಯಕ್ತಿನಾಮಗಳು ಆಯಾಯ ಜನಾಂಗಕ್ಕೆ ವಿಶಿಷ್ಟವಾಗಿರುತ್ತವೆ. ಅವುಗಳು ಜಾತಿ, ವೃತ್ತಿ, ಸ್ಥಾನಮಾನಗಳನ್ನು ಸೂಚಿಸುತ್ತಿರುತ್ತವೆ. ವ್ಯಕ್ತಿಗಳಿಗೆ ಆಥವಾ ಮಕ್ಕಳಿಗೆ ಹೆಸರಿಡುವಾಗ ಒಂದು ವಿಶೇಷ ರೀತಿ ಅಥವಾ ಸಂಪ್ರದಾಯವನ್ನು ಗಮನಿಸುತ್ತೇವೆ. ಹುಟ್ಟಿದ ಮಗುವಿಗೆ ದೇವರ ಹೆಸರನ್ನು ಇಡುವುದು ಅಥವಾ ಮಗುವಿನ ತಾತನ, ಮುತ್ತಾತನ ಹೆಸರಿಡುವುದು ವಾಡಿಕೆ. ಇದರಿಂದ ಆ ಮಗುವಿನ ಮೂಲಕ ಹಿರಿಯರನ್ನು 'ಕಾಣುವ' ಗುಣವನ್ನು ಗುರುತಿಸಬಹುದು. ಕಥಾನಾಯಕ ಧೂಪದ ಚನ್ನಯ್ಯನ ವಂಶವೃಕ್ಷದಿಂದ ಇದು ಮತ್ತಷ್ಟು ಸ್ಫುಟವಾಗುತ್ತದೆ. ಚಾಜಗಾರ ಚನ್ನನ ಮಕ್ಕಳು ಮೂಡ್ಲಪ್ಪ– ಕುಂಡಪ್ಪ–ಮೂಡ್ಲಪ್ಪನ ಮಗನ ಹೆಸರು 'ಚನ್ನ'– ಅಥವಾ ಚನ್ನಯ ಅಥವಾ ಚನ್ನೇಗೌಡ– ಈ ಚನ್ನೇಗೌಡ ತನ್ನ ಮಕ್ಕಳಲ್ಲಿ ಹಿರಿಯವನಿಗೆ ತಂದೆಯ ಹೆಸರಾದ 'ಮೂಡ್ಲಪ್ಪ' ಎಂಬ ಹೆಸರನ್ನೇ ಇಡುತ್ತಾನೆ.

ಹಳ್ಳಿಯ ಹಲವಾರು ವ್ಯಕ್ತಿಗಳನ್ನು ವಿಭಿನ್ನ ನಿಟ್ಟಿನಲ್ಲಿ ನೋಡಿ, ಅವರವರ ವ್ಯಕ್ತಿತ್ವವನ್ನು ಪರಿಸ್ಫುಟವಾಗಿ ಮೂಡಿಸಲು ಇಲ್ಲಿ ಪ್ರಯತ್ನಿಸಿದ್ದಾರೆ. ಹೀಗೆ ವ್ಯಕ್ತಿತ್ವವನ್ನು ತರುವಾಗ ಅದು ಕೇವಲ ಶುಷ್ಕ ನಿರೂಪಣೆಯಾಗಿರದೆ ಒಂದೊಂದು ಪಾತ್ರದ ಅಂತರಂಗವನ್ನು ಹೊಕ್ಕು ಒಂದೊಂದೇ ಚಿತ್ರವನ್ನು ಕಡೆದಿದ್ದಾರೆ. ಇದು ಬಿಡಿಬಿಡಿಯಾದ ವ್ಯಕ್ತಿ ಚಿತ್ರವೂ ಹೌದು; ಅಖಂಡವಾದ ಒಂದು ಗ್ರಾಮ ಜೀವನದ ಚಿತ್ರವೂ ಹೌದು. ಜೊತೆಗೆ ಜಾನಪದೀಯ ಅಧ್ಯಯನವೂ ಹೌದು.

ಹೊಲೇರ ಹುಚ್ಚೀರ, ವಾಜರಪುಟ್ಟಸ್ವಾಮಿ, ವಡ್ಡರನಾಗ, ಶಾಸ್ತ್ರದ ಶಿವಣ್ಣ, ತಿರುಕ ಚನ್ನ, ಬೆಸ್ತರ ಸಿದ್ಧ, ಸರ್ವಜ್ಞಸಂಗಣ್ಣ, ಪಟೇಲ ಕುಳ್ಳೇಗೌಡ, ಧೂಪದಚನ್ನೇಗೌಡ, ತಂಟ್ರದಲೆಚೌಡಿ, ಅಡಕೆ ಅಂದಾನಪ್ಪ, ಶಿವಾಚಾರದ ಶಿವಣ್ಣ, ತಮಾಷೆಗಾರ ಚಾಟಿಬೋರಣ್ಣ ಮೊದಲಾದ ವ್ಯಕ್ತಿ, ಜಾತಿ, ಸ್ವಭಾವ ಸಂಬಂಧಿ ಹೆಸರುಗಳು, ಬೀದಿಮನೆ ಶಂಭುಲಿಂಗೇಗೌಡರು, ದೊಡ್ಡಹಟ್ಟಿ ಕಲ್ಲೇಗೌಡರು ಮೊದಲಾದ ಮನೆ ನಿರ್ದೇಶಿತ ಹೆಸರುಗಳು ಕೃತಿಯಲ್ಲಿ ಕಂಡುಬರುತ್ತವೆ.

**ಹುಚ್ಚೀರನ ಸಾರುವಿಕೆ:** ವ್ಯಕ್ತಿನಾಮಗಳಲ್ಲಿ ಕೆಲವು ವ್ಯಕ್ತಿಗಳ ವಿವರಗಳು ಬಹುಸ್ವಾರಸ್ಯಕರವಾಗಿವೆ. ವ್ಯಕ್ತಿಚಿತ್ರಗಳು ಗ್ರಾಮ್ಯಜೀವನದ ಅಂಗವಾಗಿ ನಿಂತು ಕೃತಿಗೆ ಪೂರ್ಣತೆಯನ್ನು ತಂದುಕೊಟ್ಟಿವೆ. ಹೊಲೇರ ಹುಚ್ಚೀರ ಎಂಬವನು ಊರಿನ ನ್ಯಾಯ, ಮೆರವಣಿಗೆ ಮೊದಲಾದ ಯಾವುದೇ ಕಾರ್ಯಕ್ಕೆ ಸಾರುವುದರ ಮೂಲಕ ಚಾಲನೆ ನೀಡುತ್ತಿದ್ದ ವ್ಯಕ್ತಿ. ಇವನ ಬಾಹ್ಯರೂಪದ ವರ್ಣನೆಯನ್ನು ಲೇಖಕರು ಹೀಗೆ ಕೊಡುತ್ತಾರೆ. ಮಟ್ಟಸದ ಆಳು, ಬೂತಾಳೆ ಬುಡದಂತ ದೇಹ... ಬಣ್ಣ ಎಣ್ಣೆಗೆಂಪು, ಭುಜ ಎರಡು ಮೊಳ... ಕೈಮುರಿ ಒಂದು ಮುಂಗೈ ಗಾತ್ರ... ಕಿವಿಗೆ **ಬಾಬಲುಚಂದ್ರಮುರಾವು**[೧]... ಸೊಂಟಕ್ಕೆ **ಲಪ್ಪಟ್ಟೆ**[೨]... ಕೈಯಲ್ಲಿ ಎತ್ತರದ ದೊಣ್ಣೆ...... ಹೆಗಲಮೇಲೆ **ಹಚ್ಚಡ**[೩]... ತಿರುವಿದ ಮೀಸೆ... ನೂರಾಳಿನ ಮಧ್ಯೆ ಎದ್ದುಕಾಣುತ್ತಿದ್ದ. ಇವನನ್ನು ನೋಡಿದವರು ಯಾರು ಹೊಲೆಯವನೆಂದು ಗುರುತಿಸುತ್ತಿರಲಿಲ್ಲ.[೪] ಅಷ್ಟೇ ಅಲ್ಲ, ಒಕ್ಕಲಿಗರು ತಪ್ಪು ಮಾಡಿದರೆ ಹೆಂಡಗಿಂಡ ಕುಡಿದಿದ್ದೀಯೇನಯ್ಯಾ! ನ್ಯಾಯವಾಗಿ ದೇವರು ಮೆಚ್ಚಂಗೆ ಮಾತಾಡು!' ಎನ್ನುವಷ್ಟು ಕೆಚ್ಚಿತ್ತು ಅವನಿಗೆ. ತನ್ನ ಉತ್ತಮ ಸ್ವಭಾವದಿಂದ ಊರಿನವರ ಮರ್ಯಾದೆಗೆ ಪಾತ್ರವಾಗಿದ್ದ ಎನ್ನುವಲ್ಲಿ ಜಾತಿ ಮತ್ತು ವೃತ್ತಿ ಯಾವುದೇ ಆದರೂ ನೈತಿಕ ಸ್ಥೈರ್ಯಕ್ಕೆ ಎಂಥವರೂ ಗೌರವ ಕೊಡಲೇಬೇಕು ಎಂಬುದನ್ನು ಕಾಣಬಹುದು.

ಮೈಲಾರದ ಇತಿಹಾಸವನ್ನು ಗುರುತಿಸುವಾಗ ಹುಚ್ಚೀರನಿದ್ದ ಕಾಲ ಮೆಚ್ಚುಗೆಯಾದುದೆಂದು ಜನರು ಹೇಳುತ್ತಿದ್ದರು. ಕಾರಣವೇನೆಂದರೆ ಮೈಲಾರಕ್ಕೆ ಹೊಲೆಯರೇ ಮೂಲನಿವಾಸಿಗಳಾಗಿದ್ದು, ಅವರೇ ತರಗುಗುಡಿಸಿ ಮನೆಕಟ್ಟಿ 'ಕರುಗಲ್ಲು'ನೆಟ್ಟು ಮೊದಲಿಗೆ ಕಾಳಮ್ಮನಗುಡಿ ಕಟ್ಟಿದವರು. ಗುಡಿಯ ಪೂಜಾರಿಕೆ ಮತ್ತು ಕುಲವಾಡಿಕೆ ಎರಡೂ ವಂಶಪಾರಂಪರ್ಯವಾಗಿ ಹುಚ್ಚೀರನಿಗೆ ಬಂದಿದ್ದವು. ಹೀಗೆ ಬಂದ ಅಧಿಕಾರ, ಅಂತಸ್ತನ್ನು ಜನಮೆಚ್ಚುವಂತೆ ಉಪಯೋಗಿಸಿಕೊಂಡು ತನ್ನ ಹೆಸರನ್ನು ಶಾಶ್ವತಗೊಳಿಸಿದ್ದ. ಕುಲವಾಡಿ ಹುಚ್ಚೀರನಿಗೆ ಪಟೇಲರು ಮೊದಲುಗೊಂಡು ಎಲ್ಲರೂ ಹೆದರುತ್ತಿದ್ದರು ಎಂಬ ಹೇಳಿಕೆ ಅಂದಿನ

---

೧. 'ಒಂದು ಬಗೆಯ ಕಿವಿಯ ಆಭರಣ' – ನಿಬಂಧದ ಕೊನೆಯಲ್ಲಿ ಇದರ ಚಿತ್ರವನ್ನು ಕೊಡಲಾಗಿದೆ.

೨. ಸೊಂಟಕ್ಕೆ ಸುತ್ತಿಕೊಳ್ಳುವ ಬಟ್ಟೆ.

೩. ಹಚ್ಚಡ – ಹೊದಿಕೆ

೪. ಸೊನ್ನೆಯಿಂದ ಸೊನ್ನೆಗೆ, ಪು. ೧೪, ೧೫

ಸಾಮಾಜಿಕ ಶ್ರೇಣೀಕರಣ ವ್ಯವಸ್ಥೆಯಲ್ಲಿ ತಳವರ್ಗದವರ ಮಹತ್ತು ಮತ್ತು ಪ್ರಾಮುಖ್ಯತೆಯನ್ನು ಮನವರಿಕೆ ಮಾಡಿಕೊಡುತ್ತದೆ.

ಹುಚ್ಚೀರನ ವೈಶಿಷ್ಟ್ಯವಿರುವುದು ಅವನು ಸಾರುವುದರಲ್ಲಿ! ಅವನ ಸಾರಿಕೆ ಕಂದಾಯ, ದೇವರ ಮೆರವಣಿಗೆ, ಮಾರಮ್ಮನ ಉತ್ಸವ, ಬೋರಪ್ಪನಜಾತ್ರೆ, ಹುಲ್ಲುಗಾವಲು ಹರಾಜು ಮೊದಲಾದುವುಗಳಿಗೆ ವಿಶೇಷ ಮೆರುಗನ್ನು ನೀಡುತ್ತಿತ್ತು. ಹುಚ್ಚೀರ ಕೈಯಲ್ಲಿ ತಮಟೆ ತೆಗೆದುಕೊಂಡು ಹುಲ್ಲಿನ ಬೆಂಕಿಯಲ್ಲಿ ಕಾಯಿಸಿ ಕಾವು ಬಂದಿದೆಯೊ ಇಲ್ಲವೋ ಎಂದು ನೋಡಲು ನಾಲ್ಕು ಏಟುಹಾಕಿ, ಅದನ್ನು ಹೆಗಲಿಗೆ ಏರಿಸಿ ಬಡಿದರೆ ಊರಿನ ಜನಕ್ಕೆಲ್ಲ ಕಿವಿ ನೆಟ್ಟಗಾಗುತ್ತಿತ್ತು. ಕಂದಾಯ ಪಾವ್ತಿಗೆ ಕೂಗುವಾಗ ತಕರಾರು ಕುಳಗಳು ಎದುರಾದರೆ 'ಕಂದಾಯ ಬಂತು ಕಾಟಣ್ಣ, ಮುದೆತ್ತು ಮಾರೊ ಮೋಟಣ್ಣ'! ಎಂದು ತಕರಾರು ಕುಳ ಮೋಟಣ್ಣನನ್ನು ನಗಿಸಿ ಮುಂದೆ ಹೋಗುತ್ತಿದ್ದ. ಗಂಡಸತ್ತ ಹೆಂಗಸಿಗೆ, ಕಾಯಿಲೆ ಕಸಾಲೆಗೆ ಒಳಗಾದವರಿಗೂ ಸಮಾಧಾನ ಮಾಡಿ ಊರ ಮುಂದೆ ಕರೆದೊಯ್ಯುತ್ತಿದ್ದ... ಇಂತಹ ಹುಚ್ಚೀರನು ಮುದುಕನಾದ ಮೇಲೆ 'ಸಾರೂದು ಅಂದ್ರೆ ಒಂದು ಕಲೆ ಕಾಣ್ರೊ.. ಕಸಾನ ರಸಾಮಾಡಿ ಹೇಳ್ಬೆಕು. ಅದೊಂದು ಗಂಡು ಇದ್ಯ ತಿಳಕಳ್ರೋ' ಎಂದು ತನ್ನ ಮಕ್ಕಳಿಗೆ ಬುದ್ಧಿ ಹೇಳುತ್ತಿದ್ದ. ಕಲೆ ಎಂಬುದು ಹುಟ್ಟುಗುಣವಾಗಿ ಬರಬೇಕು; ಅದು ಹುಚ್ಚೀರನೊಬ್ಬನಿಗೆ ಮಾತ್ರ ಮೀಸಲಾಗಿತ್ತು ಎಂದು ಲೇಖಕರು ಆತನ ಹೆಚ್ಚುಗಾರಿಕೆಯನ್ನು ದಾಖಲಿಸಿದ್ದಾರೆ.

**ಬುಳ್ಳಮ್ಮನ ಅಳು:** ಕುಂಡಪ್ಪನ ಅತ್ತಿಗೆ, (ಮೂಡ್ಲಪ್ಪನ ಹೆಂಡತಿ) ಬುಳ್ಳಮ್ಮ. ಅಂದರೆ ಕಥಾನಾಯಕ ಚನ್ನ ಅಂದರೆ ಚನ್ನೇಗೌಡರ ತಾಯಿ. ಇವಳು ನೆರೆಹೊರೆಯವರ ಕಷ್ಟಸುಖಕ್ಕೆ ಆಗುತ್ತಿದ್ದಳು. ಊರಲ್ಲಿ ಯಾರಾದರೂ ಸತ್ತರೆ, ಕಣ್ಣೀರು ಹಾಕುವ ವ್ಯಕ್ತಿತ್ವ ಅವಳದು. ಅವಳು ಅಳುತ್ತಿದ್ದ ಪರಿ ಪ್ರಸಿದ್ಧವಾಗಿತ್ತು. ಯಾರೋ ಸತ್ತನೆಂದರೆ, 'ಅಯ್ಯೋ ನನಕಂದ! ನೆನ್ನೆ ತಾನೆ ನೋಡಿದ್ನಲ್ಲೊ! ಬಾಳೆದಿಂಡನಂಗಿದ್ಯಲ್ಲೋ!' ಎಂದು ಹಾಡಿಕೊಂಡು ಅಳುವವಳು– ಒಲೆಮೇಲೆ ಮುದ್ದೆಗೆ **ಹಸೀಟ್ಟು ಹೂದಿದ್ರೂ**[೧] ಗಮನಿಸದೆ ಅಳ್ತಾ ಕೂರುತ್ತಿದ್ದಳು. ಇಂದಿಗೂ ಇಂತಹ ಹಲವು ವ್ಯಕ್ತಿತ್ವಗಳು ಗ್ರಾಮೀಣರಲ್ಲಿ ಜೀವಂತವಾಗಿವೆ.

ಇಂತಹ ಹಲವಾರು ವ್ಯಕ್ತಿನಾಮಗಳು, ವಿವರಗಳು ಕೃತಿಯಲ್ಲಿ ಸಂದರ್ಭೋಚಿತವಾಗಿ ಮಿಳಿತಗೊಂಡು ಗ್ರಾಮಜೀವನಕ್ಕೆ ಕನ್ನಡಿ ಹಿಡಿದಂತಿವೆ.

**ಅಡ್ಡಹೆಸರುಗಳು:** ಅಡ್ಡಹೆಸರುಗಳು ವ್ಯಕ್ತಿಯ ಆಕಾರ, ಸ್ವಭಾವಗಳನ್ನು ಸೂಚಿಸುತ್ತವೆ. ಹುಳ್ಳಿ ಚನ್ನ – ತಿರುಕ ಚನ್ನ – ತಂಟ್ರದಲೆ ಚೌಡಿ, ತಟವಟದಯ್ಯ ಎಂಬಿವು ಕೃತಿಯಲ್ಲಿ ಬರುವ ಅಡ್ಡ ಹೆಸರುಗಳು.

---

೧. ರಾಗಿ ಮುದ್ದೆ ಮಾಡುವ ಮೊದಲು ಅಂಬಲಿ ಮಾಡಿಕೊಂಡು ಅದು ಕುದಿಬಂದ ಬಳಿಕ ಹಸಿಹಿಟ್ಟು ಹಾಕಿ ಸ್ವಲ್ಪಹೊತ್ತು ಬಿಡುವುದು.

**ತಂಟ್ರದಲೆ**: ಎಂದರೆ ಕೆದರಿದ, ಒರಟು, ಗುಂಗುರು ಕೂದಲು. ಸೊಲಿಗೆ ಎಣ್ಣೆಯಾದ್ರೂ ಸಾಲದು ತಂಟ್ರದಲೆಗೆ ಅಂತಾರೆ. ಅಂತಹ ರಾಶಿಕೇಶವನ್ನು ಹೊಂದಿದ್ದವಳು ಚೌಡಿ. ಅವಳು ಬರಿಚೌಡಿ ಅಗಿರದೆ 'ತಂಟ್ರದಲೆ ಚೌಡಿ'ಯೆಂದು ಹೆಸರಾಗಿದ್ದಳು.

**ಹುಳ್ಳಿಚನ್ನ, ತಿರುಕಚನ್ನ**: ಚನ್ನನು ಕುಂಡಪ್ಪ (ಚಿಕ್ಕಪ್ಪ)ನನ್ನು ಕಳೆದುಕೊಂಡು ಅನಾಥನಾದಾಗ 'ಮನೆಮನೆ ಮುದ್ದೆ ಮಾರಿಗುಡಿ ನಿದ್ದೆ' ಎಂಬಂತೆ ಮನೆ ಮನೆಯಲ್ಲಿ ತಿರುಗಿ ತಿನ್ನುತ್ತಿದ್ದುದರಿಂದ ತಿರುಕ ಚನ್ನನಾದ. ಅಂದಿನ ಆಹಾರದ ಒಂದಂಶವಾಗಿ ಹುರುಳಿ(ಬೇಯಿಸಿದ)ಯೊಂದಿಗೆ ಮಜ್ಜಿಗೆಯನ್ನು ಕುಡಿಯಲು ಕೊಡುತ್ತಿದ್ದರು. ಆದುದರಿಂದ ಇವನನ್ನು 'ಹುಳ್ಳಿ ಚನ್ನ'ನೆಂದೂ ಕರೆಯುತ್ತಿದ್ದರು.

**ತಟವಟದಯ್ಯ**: ಈ ಕೃತಿಯಲ್ಲಿ ಗುರುನಂಜಯ್ಯ ಎಂಬ ಒಂದು ಪಾತ್ರವಿದೆ. ಸಾತ್ವಿಕರಾಗಿದ್ದ ಗುರುಮಲ್ಲಯ್ಯನವರ ಮಗ ಈತ. ತಂದೆ ಎಷ್ಟು ಸಾತ್ವಿಕರೋ ಅದಕ್ಕಿಂತ ಮುಪ್ಪಟ್ಟು ಅಸಾತ್ವಿಕನೀತ. ಈತನ ಬುದ್ಧಿಯನ್ನು ಕಂಡು ಜನ ಅವನನ್ನು ಹೆಸರು ಹಿಡಿದು ಕರೆಯದೆ 'ತಟವಟದಯ್ಯ' ಎಂದೇ ಕರೆಯುತ್ತಿದ್ದರು. 'ತಟವಟ' ಎಂಬ ಹೆಸರು ಎಷ್ಟು ಅಂಟಿತ್ತೆಂದರೆ ಅವನ ಮಕ್ಕಳನ್ನು 'ಗುರುನಂಜಯ್ಯನವರು ಇದ್ದಾರ?' ಎಂದರೆ 'ಇಲ್ಲ' ಎನ್ನುತ್ತಿದ್ದರು. 'ತಟವಟದಯ್ಯನೋರು ಇದ್ದಾರಾ?' ಎಂದರೆ 'ಇದ್ದಾರೆ' ಎನ್ನುತ್ತಿದ್ದರು.

ತಟವಟ ಎಂದರೆ ಮೋಸ, ವಂಚನೆ ಎಂದು ಅರ್ಥ. 'ನನಗೆ ಸುಳ್ಳು ತಟವಟ ಗೊತ್ತಿಲ್ಲ' ಎಂಬ ಗ್ರಾಮ್ಯರ ಭಾಷಾಪ್ರಯೋಗವನ್ನು ನೆನೆಪಿಸಿಕೊಳ್ಳಬಹುದು.

ಅಡ್ಡ ಹೆಸರುಗಳು ಇಟ್ಟ ಹೆಸರಿನಂತೆಯೇ ಮೆರೆದು ಮೂಲಹೆಸರುಗಳನ್ನೇ ಮರೆಸಿದ್ದೂ ಇರುತ್ತದೆ. ಜನಪದರ ಸೃಜನಶೀಲತೆಗೆ ಇಂತವು ತಕ್ಕ ಉದಾಹರಣೆಗಳಾಗುತ್ತವೆ. ಈ ವೈಶಿಷ್ಟ್ಯ ಜಾನಪದೀಯ ಅಧ್ಯಯನಕ್ಕೆ ಬಹುಮುಖ್ಯ ಸಾಮಗ್ರಿಯಾಗಿದೆ.

**೬.೪ ಪಡೆನುಡಿಗಳು ಶಬ್ದಗಳು:**

'ಪಡೆನುಡಿ'ಗಳನ್ನು 'ಜಾಣ್ನುಡಿ' ಎಂದೂ ಕರೆಯುತ್ತಾರೆ. ಇವು ಜನಭಾಷೆಯ ಕೆನೆಯಂತಿರುತ್ತವೆ. ಜನರ ಅನುಭವ ಜ್ಞಾನಗಳ ರಸಘಟ್ಟಿಗಳಾಗಿರುತ್ತವೆ. ಹತ್ತಾರು ಪದಗಳಲ್ಲಿ ಹೇಳಬಹುದಾದ ವಿವರಣೆಯನ್ನು, ಭಾವತೀವ್ರತೆಯನ್ನು ಒಂದು ಪಡೆನುಡಿ ಹೇಳುತ್ತದೆ. ಇವು ಜನತೆಯ ಮಾತಿನಲ್ಲಿರುವ ಸೌಂದರ್ಯವನ್ನು ಬಿಂಬಿಸುತ್ತದೆ. ವಿಶಿಷ್ಟ ಅರ್ಥವಂತಿಕೆಯಿಂದ ಕೂಡಿರುವ ಪಡೆನುಡಿಗಳು ಕಾದಂಬರಿಯಲ್ಲಿ ಹಲವಾರು ಕಾಣಸಿಗುತ್ತವೆ.

ಅರಿಶಿನ ಕುಟ್ಟು, ಒಡೆದ ಮಡಕೆಯಾಗು(೭೭), ಉಪ್ಪುಖಾರ ಸೇರಿಸಿ ಮಾತಾಡು, ಇವು ಬೆಳ್ಳಸಂದಿಲೇ ಹೋಗಬೇಕು, ಇವ್ರ ಮೊಳಕೈ ನೀರ್ನೆ ಕುಡೀಬೇಕು (೩೪), ಕಣ್ಣರಿಯದಿದ್ದರೂ ಕರುಳರಿದುದು, ಕರುಬಿಟ್ಟುಕೊಳ್ಳು(೫೯), ಉಂಡ್ಬುಟ್ಟು ತಿಂದ ಬದ್ನೆಕಾಯಿ(೩೪), ಕುಕ್ಕೆಮೇಲೆ ಮೊರ ಮೊರದ ಮೇಲೆ ಕುಕ್ಕೆ(೯೧), ಹಾಲಿಂದು ಉಳಕತ್ತು ನೀರಿಂದು ಹೋಯ್ತು(೧೫೧), ಬಾಯಿಬಿಟ್ರೆ

ಬಣ್ಣಗೇಡು(೨೦೫), ಜಾಪಾಳ ಮಾತ್ರೆ ಕೊಡು(೨೧೦), ತರುತಳವಾಸ ಕರತಳ ಭಿಕ್ಷೆ(೨೨೨) ಇತ್ಯಾದಿ...

**'ಅರಿಶಿನ ಕುಟಿದ್ದರೂ ಅವರು ಕುಂಡಪ್ಪನನ್ನು ಮರೆಯುತ್ತಿರಲ್ಲ'** ಎಂಬ ವಾಕ್ಯದಲ್ಲಿ ಈ ಪಡೆನುಡಿಯ ಬಳಕೆಯನ್ನು ಕಾಣಬಹುದು. ಅರಿಶಿನ ಪುಡಿಯನ್ನು ಮನೆಯಲ್ಲೇ ಕುಟ್ಟಿ ಮಾಡುತ್ತಿದ್ದ ಕಾಲ ಅದು. 'ಅರಿಶಿನ ಕುಟ್ಟುವುದು' ಎಂದರೆ ಅದೊಂದು 'ಶುಭಕಾರ್ಯ' ಎಂದು ಅರ್ಥ. ಅಂದರೆ ಎಂಥ ವಿಶೇಷ ನಡೆದರೂ ಆತನಿಗೆ ಆಹ್ವಾನ ಕಟ್ಟಿಟ್ಟ ಬುತ್ತಿ ಎಂಬುದು ವೇದ್ಯವಾಗುತ್ತದೆ.

**'ಒಡೆದ ಮಡಕೆಯಾಗು'** ಎಂದರೆ 'ಯಾವ ಉಪಯೋಗಕ್ಕೂ ಬಾರದಂತಾಗು' ಎಂದರ್ಥ. ದಾರಿ ತೋರಿಸಿದ ಮಲ್ಲೇಗೌಡರ ಮನೆಯಲ್ಲೂ ಇರದೆ ಹೇಳಿಕೆ ಮಾತು ಮತ್ತು ಹಣದಾಸೆಗಾಗಿ ಪಟೇಲರ ಮನೆಗೆ ಕೆಲಸಕ್ಕೆ ಸೇರಿದ ಚನ್ನ ಕಳ್ಳತನದ ಆರೋಪ ಹೊತ್ತು ಮನೆಯಿಂದ ಹೊರಬಿದ್ದಾಗ ನೊಂದು ಅಂದು ಕೊಂಡ ಮಾತು 'ಒಡೆದ ಮಡಕೆಯಾದೆ' ಎಂಬುದು.

**'ನರಂಚಿಕಡ್ಡಿ ತಕ್ಕೊಂಡು ತುರುಕು (ಸಣ್ಣ ಅಂಚೀಕಡ್ಡಿ)':** 'ಬಲವಂತದಿಂದ ಊಟ ಮಾಡಿಸು' ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. ಕೆಲವರು ತಾವು ಹೇಳಿದಂತೆಯೇ ಕೇಳಬೇಕು. ತಮ್ಮ ಆದೇಶವನ್ನೇ ಪಾಲಿಸಬೇಕು ಎಂದು ಭಾವಿಸುವವರು ಇರುತ್ತಾರೆ. ಅವರಿಗೆ ವಿರೋಧವಾಗಿ ಅದನ್ನು ವಿವರಿಸುವಾಗ ಹೇಳುವ ಮಾತು. ಇವ್ರ ಬೆಳ್ಳ ಸಂದೀಲೇ ಹೋಗಬೇಕು. ಇವು ಮೊಳಕೈ ನೀರ್ನೇ ಕುಡೀಬೇಕು' ಎಂಬುದು.

**ಕರುಬಿಟ್ಟುಕೊಳ್ಳು** ಈ ನುಡಿಗಟ್ಟು ಗ್ರಾಮೀಣ ಸಂಸ್ಕೃತಿಯನ್ನು ಎತ್ತಿಹಿಡಿಯುವಂತಹದ್ದು. ಇದರಲ್ಲಿ ಸಂಸ್ಕೃತಿ ಮಡುಗಟ್ಟಿದೆ. 'ಕರುಬಿಟ್ಟುಕೊಳ್ಳುವುದು' ಎಂದರೆ ಮೂಕಜಂತುವಿಗೆ ಮೊದಲು ಬಿಟ್ಟು (ಅಂದರೆ ಕರುವಿಗೆ ಮೊದಲು ಹಾಲು ಕುಡಿಯಲು ಬಿಟ್ಟು) ಅನಂತರ ಕೊಳ್ಳುವುದು – ಅಂದರೆ ಹಾಲುಕರೆಯುವುದು. ಜನಪದರಲ್ಲಿ ಕರಬಿಟ್ಟ ನಂತರ ತಾವು ಊಟ ಮಾಡುವ ಪದ್ಧತಿಯಿದೆ. ಕರುವಿಗೆ ಹಾಲೂಡಿಸಿ ತಾವು ಕರೆದುಕೊಳ್ಳುವ ಸಮಯವನ್ನು 'ಕರಬಿಡೋ ಹೊತ್ತು' ಎಂತಲೇ ಕರೆದಿದ್ದಾರೆ. ಜನಪದ ಸಂಸ್ಕೃತಿ ಇಂತಹ ನುಡಿಗಟ್ಟುಗಳಲ್ಲಿ ಅನಾವರಣಗೊಂಡಿದೆ.

**ಹಾಲಿಂದು ಉಳಕತ್ತು; ನೀರಿಂದು ಹೋಯ್ತು** ಮನುಷ್ಯ ಪಡುವ ಕಷ್ಟಕ್ಕೆ ಒಂದು ಅರ್ಥವಿದೆ; ಅದರಂತೆ ಪ್ರತಿಫಲವೂ ಇರುತ್ತದೆ. ಕಷ್ಟಪಡದೆ ಚಿಕ್ಕಾಸೂ ದಕ್ಕುವುದಿಲ್ಲ; ದಕ್ಕಿದರೂ ಉಳಿಯುವುದಿಲ್ಲ. ಅದರಂತೆ ನ್ಯಾಯದಿಂದ ಸಂಪಾದಿಸಬೇಕೆಂಬ ನೀತಿ 'ಹಾಲಿಂದು ಉಳಕತ್ತು; ನೀರಿಂದು ಹೋಯ್ತು' ಎಂಬ ಮಾತಿನಲ್ಲಿ ಅಡಗಿದೆ. ಹಾಲನ್ನು ಮಾರುವಾಗ ಹಣದಾಸೆಗಾಗಿ

ನೀರು ಬೆರಸುವ ಮಂದಿ ಮುಂದೆ ಹಾಳಾಗುವ ಅಥವಾ ತೊಂದರೆಗೆ ಸಿಲುಕುವುದನ್ನು ನೋಡಿ ಕಡೆದ ನುಡಿಗಟ್ಟಿರಬೇಕು.

**'ಕುಕ್ಕೆ ಮೇಲೆ ಮೊರ ಮೊರದ ಮೇಲೆ ಕುಕ್ಕೆ'** ಹಾಕುವುದಕ್ಕೆ ಶುರುಮಾಡಿದಳು. ಇದು ತಿರುಕ ಚನ್ನನಿಗೆ ತನ್ನ ಮಗಳನ್ನು ಕೇಳಲು ಬಂದಾಗ ಗೌಡರ ನಾದಿನಿ ನಡೆದುಕೊಂಡ ರೀತಿ. ಇದು ಹೆಣ್ಣು ತನ್ನ ಅಸಮಾಧಾನವನ್ನು ಸೂಚಿಸುವ ಪ್ರಕ್ರಿಯೆಯನ್ನು ಕಟ್ಟಿಕೊಡುತ್ತದೆ.

**ಜಾಪಾಳ ಮಾತ್ರೆ ಕೊಡು:** ಭೇದಿಯಾಗುವಂತೆ ಮಾಡು ಎಂದರ್ಥ. ತಿಳಿಯದಂತೆ ತೊಂದರೆಯನ್ನುಂಟುಮಾಡು – ಇಕ್ಕಟ್ಟಿಗೆ ಸಿಕ್ಕಿಸು ಎಂದು ಇದನ್ನು ಅರ್ಥೈಸಬಹುದು ಜಾಪಾಳಬೀಜದಿಂದ ಮಾಡಿದ ಮಾತ್ರೆಯೇ ಜಾಪಾಳ ಮಾತ್ರೆ. 'ಜಾಪಾಳಮಾತ್ರೆ ವೈಕುಂಠಯಾತ್ರೆ' ಎಂಬ ಗಾದೆಯೇ ಇದೆ. ಕಾದಂಬರಿಯಲ್ಲಿ ಶಿವಣ್ಣನನ್ನು ಇಕ್ಕಟ್ಟಿಗೆ ಸಿಕ್ಕಿಸಿದ್ದನ್ನು 'ಜಾಪಾಳಮಾತ್ರೆ ಕೊಟ್ಟ' ಎಂಬ ನುಡಿಗಟ್ಟಿನೊಂದಿಗೆ ಹೇಳಿದ್ದಾರೆ.

ಹೀಗೆ ಪಡೆನುಡಿಗಳು ಈ ಪ್ರಾದೇಶಿಕ ಕಾದಂಬರಿಯಲ್ಲಿ ಕಾಣಿಸಿಕೊಂಡು ಜನರ ರೀತಿನೀತಿಗಳನ್ನು ಪ್ರತಿಬಿಂಬಿಸಿವೆ. ಲೇಖಕರ ಅನುಭವದ ಗಟ್ಟಿತನ ಪಡೆನುಡಿಗಳಿಂದ ವ್ಯಕ್ತವಾಗಿದ್ದು, ಈ ಕಲಾಕೃತಿಗೆ ಹೊಸ ಮೆರುಗನ್ನು ನೀಡಿವೆ. ವಿಷಯದ ಸ್ಪಷ್ಟತೆಗೆ, ಗಾಢತೆಗೆ ಪಡೆನುಡಿಗಳು ಅನಿವಾರ್ಯವಾಗಿದ್ದು ಭಾಷೆಗೆ ಶ್ರೀಮಂತಿಕೆಯನ್ನು ತರಲು ಸಾಧನಗಳಾಗುತ್ತವೆ.

**ಪ್ರಾದೇಶಿಕ ಶಬ್ದಗಳು**

ಕೆಲವು ವಿಶೇಷವಾದ ಶಬ್ದಗಳಿಂದ ಈ ಕೃತಿ ನಿಜಕ್ಕೂ ಶ್ರೀಮಂತಗೊಂಡಿದೆ. ಕಾದಂಬರಿಯಲ್ಲಿ ಬರುವ ಬಯಲುಸೀಮೆ ಜನರ ಅಪ್ಪಟ ಆಡುಭಾಷೆ ಪ್ರತಿಪುಟದಲ್ಲಿಯೂ ವ್ಯಕ್ತವಾಗಿದೆ. ಪ್ರಾದೇಶಿಕ ಭಾಷೆಯ ಮೂಲಸತ್ವವನ್ನು ಬಳಸಿರುವುದೇ ಈ ಕಾದಂಬರಿಯ ಹೆಚ್ಚುಗಾರಿಕೆಯಾಗಿದೆ. ಮರೆಯಾಗಿರುವ, ಮರೆಯಾಗುತ್ತಿರುವ ಎಷ್ಟೋಂದು ಶಬ್ದಗಳು ಇಲ್ಲಿ ಸಹಜವಾಗಿ ಪಾತ್ರಗಳ ನಾಲಗೆಯ ಮೇಲೆ ನಲಿದಾಡಿವೆ. ಲೇಖಕರು ಹಳ್ಳಿಯ ಬದುಕನ್ನು ಸವಿದು ಸೂಕ್ಷ್ಮವಾಗಿ ಅವಲೋಕಿಸಿರುವುದಕ್ಕೆ ಇದು ಸಾಕ್ಷಿಯಾಗಿದೆ.

**ಎತ್ತೋಳಿ**

'ಎತ್ತುವಳಿ' ಎಂಬುದು ಗ್ರಾಮ್ಯರ ಬಾಯಲ್ಲಿ 'ಎತ್ತೋಳಿ' ಆಗಿದೆ. ಎತ್ತೋಳಿ ಎಂದರೆ ಸಂಗ್ರಹಿಸುವುದು ಎಂದಾಗುತ್ತದೆ. ಊರೊಟ್ಟಿನ ಧಾಮಿಕ ಕಾರ್ಯಗಳಿಗೆ ಗ್ರಾಮದ ಎಲ್ಲಾ ಕೋಮಿನವರಿಂದ ಧನ ಅಥವಾ ಧಾನ್ಯ ಇಲ್ಲವೆ ಎರಡನ್ನೂ ಸಂಗ್ರಹಿಸುತ್ತಿದ್ದರು. ಇದೇ ಎತ್ತೋಳಿ. 'ಎತ್ತೋಳಿ' ಎಂಬ ಪದ ಮತ್ತು ಪದ್ಧತಿಯು ಇಂದಿಗೂ ಚಾಲ್ತಿಯಲ್ಲಿದೆ. ಪ್ರಸ್ತುತ ಕೃತಿಯಲ್ಲಿ ದೇವಸ್ಥಾನದ ಜೀರ್ಣೋದ್ಧಾರಕ್ಕೆ 'ಎತ್ತೋಳಿ' ಸಂಗ್ರಹಿಸುವುದನ್ನು ಕಾಣಬಹುದು.

**ಮುಗುವಳಿ:**[೧]

'ಮುಂಗಡ' ಎಂಬುದು ಇದರ ಮತ್ತೊಂದು ರೂಪ. ಇದು ಆಂಗ್ಲಭಾಷೆಯ advance ಎಂಬುದಕ್ಕೆ ಸಂವಾದಿಯಾದ ಪದ. ಇದು ಇಂದು ಬಹುಪಾಲು ಮರೆಯಾಗಿರುವ ಶಬ್ದ.

**ಮಿರಾಸೆ:** ಹಡದೆ ಎಂತಲೂ ಕರೆಯುತ್ತಾರೆ. ಅಗಸ, ಅಕ್ಕಸಾಲಿಗ, ಕ್ಷೌರಿಕ, ಕುಂಬಾರ, ಬಡಗಿ ಮುಂತಾದ ಗ್ರಾಮ ನೌಕರರ ಸೇವೆಗೆ ಪ್ರತಿಫಲವಾಗಿ ವರ್ಷಕ್ಕೊಂದು ಸಲ ಸುಗ್ಗಿಯ ಕಾಲದಲ್ಲಿ ಧಾನ್ಯದ ಒಕ್ಕಣಿಯಾದ ಮೇಲೆ ಕೊಡುವ ಧಾನ್ಯವೇ ಮಿರಾಸೆ.

**ಎಲ್ಕ:** ಎಲ್ಲರಿಗೂ ಎಂಬುದನ್ನು 'ಎಲ್ಕ' ಎಂತಲೂ ಹೋಗೋಣ – ಬರೋಣ ಎಂಬುದಕ್ಕೆ ಹೋಗ್ಮಾ, ಬರ್ಮಾ' ಎಂತಲೂ ಬಳಸಿ ಕೊಂಚ ರಾಗ ಎಳೆದು ಮಾತಾಡುವ ಭಾಷೆ ಮಂಡ್ಯದ ಸುತ್ತಮುತ್ತಲ ಬಯಲುಸೀಮೆಯದು. ಇದು ಈ ಪ್ರಾಂತಕ್ಕೆ ಮಾತ್ರ ಸೀಮಿತವಾದ ಭಾಷಾವೈಶಿಷ್ಟ್ಯವಾಗಿದೆ. ಇಂದಿಗೂ ಈ ಪ್ರಯೋಗಗಳು ಚಲಾವಣೆಯಲ್ಲಿವೆ.

ಸೊನ್ನೆಯಿಂದ ಸೊನ್ನೆಗೆ ಕಾದಂಬರಿಯ ಅವಲೋಕನದಿಂದ ಒಂದು ಅರ್ಥಕೋಶವೇ ತೆರೆದುಕೊಳ್ಳುತ್ತದೆ. ಬಯಲುಸೀಮೆಯ ಅಪೂರ್ವವಾದ ಮರೆಯಾಗಿರುವ ಎಷ್ಟೋ ಪದಗಳು ಇಲ್ಲಿವೆ. ಆ ಪದಗಳ ಅರ್ಥವನ್ನು ಕೃತಿಯ ಕೊನೆಯಲ್ಲಿ ನೀಡಿ ಲೇಖಕರು ಮಹದುಪಕಾರ ಮಾಡಿದ್ದಾರೆ.

**೬.೫. ಕಲೆ, ಕ್ರೀಡೆ ಜನಪದಗಣಿತ**

ಜನಪದರಲ್ಲಿ ಅಸ್ತಿತ್ವದಲ್ಲಿರುವ ಕಲೆ, ಕ್ರೀಡೆಗಳು ದೈಹಿಕ, ಮಾನಸಿಕ ದಾರ್ಢ್ಯತೆ ಮತ್ತು ಸ್ವಾಸ್ಥ್ಯಗಳನ್ನು ಕಾಪಾಡಿಕೊಂಡು ಬರುವ ಸಂಗತಿಗಳಾಗಿವೆ. ಕ್ರೀಡೆಗಳಂತೂ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತವೆ. ಕಲೆಯ ವಿಚಾರದಲ್ಲಿಯೂ ಪ್ರಾದೇಶಿಕತೆಯನ್ನು ಗುರುತಿಸಬಹುದು.

ಹುಚ್ಚೀರನ 'ಸಾರುವಿಕೆ' ಕಲೆಗಾರಿಕೆಯಿಂದ ಕೂಡಿದೆ. ಅವನೇ ತನ್ನ ಮುಂದಿನವರು ಸಾರುವುದನ್ನು ಕಂಡು **'ಸಾರಿಕೆ ಒಂದು ಕಲೆ ಕನ್ರೋ'** ಎನ್ನುತ್ತಾನೆ. ಅವನ ಸಾರುವಿಕೆಯಲ್ಲಿ ವಿಶಿಷ್ಟ ಭಾವ, ಭಂಗಿ, ಮಾತುಗಾರಿಕೆಯನ್ನು ಗಮನಿಸುತ್ತೇವೆ.

ಕೃತಿಯಲ್ಲಿ ಕುಂಡಪ್ಪನ ಜೀವನ ಶೈಲಿಯಲ್ಲಿ ಕಲೆಗಾರಿಕೆಯನ್ನು ಗುರುತಿಸಬಹುದು. ಕುರುಡನಾದರೂ ಅವನು ಮಾಡದ ಕೆಲಸಗಳಿರಲಿಲ್ಲ. ಹಗ್ಗ ಹೊಸೆಯುವುದು, ತ್ರಾಸು ಸರಿ ಮಾಡುವುದು. ತ್ರಾಸು[೨] ಅಂದರೆ ಅಂದಿನ ಕಾಲದಲ್ಲಿ ಎಲ್ಲರ ಮನೆಯಲ್ಲೂ ಇಟ್ಟುಕೊಂಡಿರುತ್ತಿದ್ದ

---

೧. ಸೊನ್ನೆಯಿಂದ ಸೊನ್ನೆಗೆ, ಪು. ೧೬

೨. ತ್ರಾಸನ್ನು ತಕ್ಕಡಿ, ತೂಗುಕೋಲು ಎಂತಲೂ ಕರೆಯುತ್ತಾರೆ. ಈ ರೀತಿಯ ತ್ರಾಸನ್ನು ನಿಬಂಧದ ಕಡೆಯಲ್ಲಿ ಇರುವ ಚಿತ್ರದಲ್ಲಿ ಕಾಣಬಹುದು.

ತೂಕ ಮಾಡುವ ಸಾಮಗ್ರಿ. ಒಂದು ಕಡ್ಡಿ, ಆ ಕಡೆ ಈ ಕಡೆ ಮೂರು ದಾರಗಳಲ್ಲಿ ತೂಗು ಹಾಕಿದ ತಟ್ಟೆಗಳು, ಇಷ್ಟೆ ತ್ರಾಸು. ಈ ತ್ರಾಸನ್ನು ಸರಿಮಾಡಿಕೊಳ್ಳಲು ತಿಳಿಯದ ಹೆಂಗಸರು ಕುಂಡಪ್ಪನ ಕೈಗೆ ಕೊಟ್ಟರೆ, ಅರಿಶಿನದ ಕೊನೆಯನ್ನು ಸೇರಿಸಿ ತ್ರಾಸು ಸರಿ ಮಾಡುತ್ತಿದ್ದ.

**ಮಂತಿನಹುರಿ ಹೊಸೆಯುವುದು:** ಹೆಂಗಸರು ಮೊಸರು ಕಡೆಯಲು ಉಪಯೋಗಿಸುತ್ತಿದ್ದ ಮಂತಿನಹುರಿಯನ್ನು ಹೊಸೆಯುವುದು ಗಂಡಸರಿಗೆ ತಿರಸ್ಕಾರವಾದರೂ ಕುಂಡಪ್ಪ ಇಲ್ಲ ಎನ್ನದೆ ಮಾಡುತ್ತಿದ್ದ. ಸೆಣಬಿನಿಂದ ಮಂಕಿನ ಹುರಿಯನ್ನು ಹೊಸೆದು ಕೊಟ್ಟು ಹೆಂಗಸರ ಮೆಚ್ಚುಗೆ ಗಳಿಸಿದ್ದ ಎಂಬ ಮಾಹಿತಿ ನೀಡಿದ್ದಾರೆ.

ಕ್ರೀಡೆಗಳು ದೈಹಿಕ ಸ್ವಾಸ್ಥ್ಯಕ್ಕೆ ಅವಶ್ಯಕ. ಬಯಲು ಸೀಮೆಯಲ್ಲಿ ಹುಡುಗರು ದನಕಟ್ಟೆ ಹುಲ್ಲು ಹಾಕಿಯಾದ ಮೇಲೆ ಒಂದೆಡೆ ಸೇರುತ್ತಿದ್ದರು. ಚೆಂಡಾಟ, ಕವಣೆ[೧] ಬೀರುವ ಪಂದ್ಯ, 'ನನ್ನ ರಟ್ಟೆ ಬಗ್ಗಸ್ತೀಯ ನೊಡುಮಾ!' ಎಂಬ ಶಕ್ತಿ ಪರೀಕ್ಷಿಸುವ ಗ್ರಾಮೀಣ ಕ್ರೀಡೆಗಳನ್ನು ಆಡುತ್ತಿದ್ದರು.

**ಜನಪದ ಗಣಿತ:** ಬದುಕಿನ ವ್ಯವಹಾರದ ಒಂದು ಅಂಗವಾಗಿರುವ ಲೆಕ್ಕ ಎಲ್ಲರಿಗೂ ಎಲ್ಲ ಕಾಲಕ್ಕೂ ಅವಶ್ಯಕ. ವ್ಯವಹಾರದ ಸ್ವರೂಪವನ್ನು ತಿಳಿಸುವ ಲೆಕ್ಕಗಳು ಬರುಬರುತ್ತಾ ವಿನೋದಾಂಶವುಳ್ಳ ಚಮತ್ಕಾರಿಕೆ ರೂಪಗಳಾಗಿರುವುದನ್ನು ಕಾಣುತ್ತೇವೆ.

ಗ್ರಾಮ್ಯರಲ್ಲಿ ಎಲ್ಲರೂ ಲೆಕ್ಕಬಲ್ಲವರಾಗಿರುತ್ತಿರಲಿಲ್ಲ. ದೈಹಿಕ ಶ್ರಮವನ್ನಷ್ಟೇ ನಂಬಿ ಬದುಕು ಸಾಗಿಸುತ್ತಿದ್ದ ಜನ ಬುದ್ಧಿವಂತಿಕೆಯ ಲೆಕ್ಕಾಚಾರಕ್ಕೆ ತಲೆಕೆಡಿಸಿಕೊಂಡವರಲ್ಲ. ಈ ಕೃತಿಯಲ್ಲಿ ಬರುವ ಚನ್ನ ಅನುಕೂಲಸ್ಥನಾದರೂ ಚಿನ್ನ ಬೆಳ್ಳಿಗಳ ತೂಕ ಅವನಿಗೆ ತಿಳಿಯದು. ತೊಲ, ಗುಂಜಿಗಳ ಪರಿಚಯವಿರದ ಆತನಿಗೆ ಗೊತ್ತಿದ್ದುದು ಸೇರು, ಕೊಳಗ, ಮಣ ಇಷ್ಟೇ. ಅವನು 'ಜೀವಮಾನದಲ್ಲಿ ನೂರೈವತ್ತು' ಎಂಬ ರೂಪಾಯಿಯನ್ನು ನೋಡಿದುದು ಹೋಗಲಿ 'ನೂರೈವತ್ತು' ಎಂಬ ಅಂಕಿಯನ್ನು ಕೇಳಿರಲಿಲ್ಲ. ಇಪ್ಪತ್ತರ ಮೇಲೆ ಯಾವತ್ತೂ ದುಡ್ಡು ಲೆಕ್ಕಹಾಕಿರಲಿಲ್ಲ. ನಲವತ್ತು ಎನ್ನುವುದಕ್ಕೆ ಎರಡಿಪ್ಪತ್ತು ಎನ್ನುತ್ತಿದ್ದ. ಅವನ ಹೆಂಡತಿ ಚೌಡಿಯೂ ಒಂದಿಪ್ಪತ್ತು, ಎರಡಿಪ್ಪತ್ತು, ಮೂರಿಪ್ಪತ್ತು, ನಾಲ್ಕುಪ್ಪಿತ್ತು ಎಂದು ಎಣಿಸಿ ಹೊಸ ಗಣಿತಶಾಸ್ತ್ರಜ್ಞೆಯಾಗಿದ್ದಳು ಎಂಬುದನ್ನು ಗಮನಿಸಿದರೆ ಗೊತ್ತಿರುವ ಒಂದು ಅಂಕಿಯನ್ನೇ ಇಮ್ಮಡಿ, ಮುಮ್ಮಡಿ ಮಾಡುತ್ತಾ ತಮ್ಮ ಸಿರಿವಂತಿಕೆ ತಿಳಿಯುತ್ತಿದ್ದ ಅಥವಾ ಅಳೆಯುತ್ತಿದ್ದ ಕಾಲವದು.

ಹೀಗೆ ಅಷ್ಟಾಗಿ ತಿಳಿಯದ ಗಣಿತ ಜಾನಪದರ ಕಲ್ಪನೆಗೆ ಅನುಗುಣವಾಗಿ ಬಿಡಿಸಲ್ಪಡುತ್ತಿತ್ತು. ಇದರಿಂದ ಅವರ ಲೆಕ್ಕಜ್ಞಾನದ ಬಗೆಗಿನ ಮುಗ್ಧತೆ ಎಷ್ಟಿತ್ತು ಎಂಬುದನ್ನು ಅರಿಯಬಹುದು.

---

೧. ಕಲ್ಲಿನಿಂದ ಬೀಸಿ ಹೊಡೆಯಲು ದಾರ ಅಥವಾ ಹುರಿಯಿಂದ ಮಾಡಿದ ಸಾಧನ. 'ಕವಣೆ'ಯ ಚಿತ್ರವನ್ನು ನಿಬಂಧದ ಕಡೆಯ ಚಿತ್ರ ಭಾಗದಲ್ಲಿ ಕೊಟ್ಟಿದೆ.

## ಅಧ್ಯಾಯ : ಏಳು

# ನ್ಯಾಯಪದ್ಧತಿ

**'ಸಂ**ಪ್ರದಾಯ' ಎಂಬುದು ಜನರ ಬದುಕಿನೊಂದಿಗೆ ವಿಭಜಿಸಲಾಗದ ಸಂಬಂಧವನ್ನು ಸ್ಥಾಪಿಸಿಕೊಂಡಿದೆ. ಕೋರ್ಟು - ಕಛೇರಿಗಳು ಬರುವುದಕ್ಕೆ ಮುನ್ನ ಸಂಪ್ರದಾಯಗಳೇ ಕಾನೂನಿನ ಕೆಲಸ ಮಾಡುತ್ತಿದ್ದವು. ಆಯಾಯ ಊರುಗಳ ಮಧ್ಯೆ ಇರುವ ಚಾವಡಿ[೧] ಕಟ್ಟೆಗಳ ಮೇಲೆ ನ್ಯಾಯ ತೀರ್ಮಾನಿಸುವ ಪರಿಪಾಠವಿತ್ತು. ಕೋರ್ಟ್‌ಮೆಟ್ಟಿಲು ಹತ್ತುವುದು ಅವಮಾನಕರವೆಂದು ಭಾವಿಸಿರುವ ಸಮಾಜಗಳಲ್ಲಿ ಚಾವಡಿಕಟ್ಟೆಗಳಿಗೆ ಇಂದಿಗೂ ವಿರಾಮವಿಲ್ಲ.

ಮಾನವ ಸಂಬಂಧ, ಕೌಟುಂಬಿಕ ಪದ್ಧತಿ ಸೌಹಾರ್ದಯುತವಾಗಿರಲೆಂದು ಜನಪದರು ನ್ಯಾಯಪದ್ಧತಿಯನ್ನು ತಂದರು. ಗೌಡ ಅಥವಾ ಪಟೇಲನಾದವನು ಊರಿನ ಉಸಾಬರಿಯನ್ನು ನೋಡಿಕೊಳ್ಳುತ್ತಿದ್ದ. ಸಾಮಾಜಿಕ ಕಟ್ಟುಪಾಡುಗಳು ಇವರಿಗೆ ದಾರಿ ದೀವಿಗೆಗಳಾಗಿದ್ದವು. ಪಂಚಾಯ್ತಿ ಕಟ್ಟೆಯಲ್ಲಿ ಅಷ್ಟೇ ಅಲ್ಲದೆ 'ದೇವರ ಮನೆ'ಗಳಲ್ಲಿ ಊರಿನವರು ಸೇರುತ್ತಿದ್ದ ಉದಾಹರಣೆಯಿದೆ. 'ದೇವರ ಮನೆ' ಎಂದರೆ ಊರಿನವರು ಸ್ವಂತ ಖರ್ಚಿನಲ್ಲಿ ಕಟ್ಟಿಕೊಂಡ ಮನೆ[೨] ಅದು ದೇವಾಲಯಕ್ಕೆ ಸಮನಾದುದು. ಊರಿನ ಸಣ್ಣಪುಟ್ಟ ವ್ಯವಹಾರಗಳು - ಅಂದರೆ ಹೆಣ್ಣು ತರುವ, ಬಿಡಿಸುವ, ಲೇವಾದೇವಿ ವಿಚಾರ, ಗುಡಿಯ ಊರ್ಜಿತದ ವಿಚಾರಗಳೆಲ್ಲ ಅಲ್ಲೆ ನಿಷ್ಕರ್ಷೆಯಾಗುತ್ತಿದ್ದವು.

ಪಂಚಾಯಿತಿಗೆ ಹೆಂಗಸರು ಯಾವತ್ತೂ ಕರೆಸದ ಹೊರತು ಬರುವಂತಿರಲಿಲ್ಲ.[೩] ಇದು ಈಗಲೂ ಚಾಲ್ತಿಯಲ್ಲಿದೆ. ಸಭೆ ಸೇರಿದ ನಂತರ 'ಕೈಮುಗಿದು' ಮಾತನಾಡುವುದು ನೀತಿಯಾಗಿತ್ತು.

ಚನ್ನೇಗೌಡ ಊರಿಗೆ ದೊಡ್ಡವರಾಗಿ ಹೆಸರುಮಾಡಿ, ನ್ಯಾಯ ತೀರ್ಮಾನಿಸುವ ಶಕ್ತಿಗಳಿಸಿಕೊಂಡಂತೆ ಅವರ ಮನೆಯೇ 'ಚಾವಡಿ' ಆಗಿತ್ತು. ಅವರೇ ಏಕೈಕ ಪಂಚಾಯ್ತಿದಾರರೂ ಆಗಿದ್ದರು. ಆ ಗೌರವಕ್ಕಾಗಿ ಅವರನ್ನು ಮಾವ ಎಂದು ಸಂಬೋಧಿಸುವ ಪರಿಪಾಠವಿತ್ತು. ಚನ್ನೇಗೌಡರ ನ್ಯಾಯ 'ಧರ್ಮದ ನ್ಯಾಯ'ವಾಗಿ ಅವರ ಮನೆ ಜಗಲಿ 'ಧರ್ಮದ ಜಗುಲಿ'ಯೇ ಆಗಿತ್ತು ಎಂಬುದನ್ನು ಗಮನಿಸಿದಾಗ ನ್ಯಾಯದ ಕಟ್ಟೆಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತಿದ್ದುದು ತಿಳಿದುಬರುತ್ತದೆ.

---

೧. ಹಳ್ಳಿಯಲ್ಲಿ ಪಂಚಾಯಿತಿ ಸಭೆ ಸೇರುವ ಸ್ಥಳ.

೨. ಸೊನ್ನೆಯಿಂದ ಸೊನ್ನೆಗೆ, ಪು. ೧೦

೩. ಅದೇ, ಪು. ೧೧

ನ್ಯಾಯಪದ್ಧತಿ ಜನರ ಸಾಂಸ್ಕೃತಿಕ ಬದುಕನ್ನು ಚಿತ್ರಿಸುತ್ತದೆ. ಸಮಾಜದ ಕಟ್ಟುಪಾಡುಗಳೇ ಅವರ ನಿಯಮಗಳು. ಅದಕ್ಕೆ ದೇವರ, ಗುರುಹಿರಿಯರ ಸಾಕ್ಷಿ, ಆಣೆ ಪ್ರಮಾಣಗಳೇ ಸಾಕಾಗಿದ್ದವು. ಜಟಿಲವಾದ ಸಮಸ್ಯೆಗಳೂ ಸಮಾಜದ ಭಯಭೀತಿಯಿಂದ ಸರಳವಾಗಿ ಬಗೆಹರಿಯುತ್ತಿದ್ದವು. ಊರ ಪ್ರಮುಖರು ಕಟ್ಟುಪಾಡುಗಳನ್ನು ರೂಪಿಸು–ವವರಾದ್ದರಿಂದ ಅವರ ಬಗೆಗೆ ಗೌರವವಿರುತ್ತಿತ್ತು. ಅವರು ಕೊಟ್ಟ ತೀರ್ಪಿಗೆ ಉಳಿದವರು ತಲೆಬಾಗುತ್ತಿದ್ದರು. ಇಂದು ನ್ಯಾಯಕ್ಕಾಗಿ ಕೋರ್ಟು–ಕಛೇರಿ ಅಲೆಯುವುದನ್ನು ಗಮನಿಸಿದಾಗ ನ್ಯಾಯತೀರ್ಮಾನದ ಸಂಕೀರ್ಣಾವಸ್ಥೆಯನ್ನು ಗುರುತಿಸಬಹುದು. ಅಪರಾಧಗಳು ಹೆಚ್ಚಿದಂತೆ ಈ ರೀತಿಯ ಪರಿಸ್ಥಿತಿಗಳು ಅನಿವಾರ್ಯವಾದರೂ, ಚಾವಡಿಯ ಸರಳನ್ಯಾಯಪದ್ಧತಿ ನೆನಪಾಗದೆ ಇರುವುದಿಲ್ಲ.

**೬.೧. ಪವಾಡಗಳು (ಮಹಾತ್ಮೆ)**

ಪವಾಡಗಳು ಜಾನಪದೀಯ ಅಧ್ಯಯನದಲ್ಲಿ ಕಂಡುಬರುವುದಕ್ಕೆ ಮೂಲ ಕಾರಣ ಅವು ಗ್ರಾಮೀಣ ಜನತೆಯ ನಡುವೆ ಹುಟ್ಟಿ, ಬೆಳೆದು ಜೀವಂತದಿಂದ ಇರುವುದು. ನಿರ್ದಿಷ್ಟ ವ್ಯಕ್ತಿ, ಸ್ಥಳ, ಘಟನೆ, ಚರಿತ್ರೆ, ಸಮಾಜ, ಸಂಸ್ಕೃತಿಯ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಇವುಗಳನ್ನು ಜನರು ನಿಜವೆಂದೇ ನಂಬುತ್ತಾರೆ. ಒಬ್ಬರಿಂದ ಒಬ್ಬರಿಗೆ ಹರಡುವ ಇವು ಕಾಲದ ಜೊತೆ ಸೇರಿ ಅನೇಕ ಪ್ರಕ್ಷೇಪ, ಕಲ್ಪನೆಗಳೊಂದಿಗೆ ಮತ್ತಷ್ಟು ಸ್ವಾರಸ್ಯಕರವಾಗಿರುತ್ತವೆ. ಕೆಲವು ವ್ಯಕ್ತಿಗಳ ಬಗ್ಗೆ ಗೌರವಾದರಗಳನ್ನು ಮೂಡಿಸಲು ಇವು ಹುಟ್ಟಿಕೊಳ್ಳುತ್ತವೆ. ಐತಿಹ್ಯಗಳೆನಿಸುವ ಇವುಗಳಲ್ಲಿ ಇತಿಹಾಸದ ಅಂಶಗಳೂ ಇಲ್ಲದಿಲ್ಲ.

'ಸೊನ್ನೆಯಿಂದ ಸೊನ್ನೆಗೆ' ಕೃತಿಯಲ್ಲಿ ಬಂದಿರುವ ಕೆಲವು ಪವಾಡಗಳು ಉಪಕತೆಗಳಂತೆ ಬಂದು ಕೃತಿಯ ಸೊಗಸನ್ನು ಹೆಚ್ಚಿಸಿವೆ.

ವೀರಭದ್ರದೇವರ ಜೊತೆ ಗುರುಸಿದ್ಧಯ್ಯನವರು ಮಾತನಾಡುವುದು – ಆ ಮಾತನ್ನು ಕೇಳಿಸಿಕೊಂಡ ಲಿಂಗಶೆಟ್ಟಿಗೂ, ಬೀರಹೆಗ್ಗಡೆಗೂ ಶಾಪಕೊಟ್ಟುದು ಸ್ವಾರಸ್ಯಕರವಾದ ಕತೆಯಾಗಿದೆ. ಕಾಕತಾಳೀಯ ಎಂಬಂತೆ 'ನೂರೊಂದು ಮಕ್ಕಳಾದ್ರೂ ಒಬ್ಬ ಉಳಕೊಳ್ಳಿ! ಅಷ್ಟೈಶ್ವರ್ಯ ಬಂದ್ರೂ ಹಿಟ್ಟಿಗೆ ಅಧ್ವಾನವಾಗ್ಲಿ' ಎಂಬ ಶಾಪ ಲಿಂಗಶೆಟ್ಟಿಯ ವಿಷಯದಲ್ಲಿ ನಿಜವಾದುದು, ನೀನು ಹಿಂಗೊಂಡ ಹಾಯ್ವಾಗ ನಿನ್ನ ಕಾಲೆಲ್ಲ ಸುಲದ್ಹೋಗ್ಲಿ' ಎಂದು ಬೀರೇಹೆಗ್ಗಡೆಗೆ ಕೊಟ್ಟ ಶಾಪ ಅವನ ವಂಶದವರಿಗೆ ತಟ್ಟಿ ಸತ್ಯವಾದುದು ಪವಾಡವೇ ಸರಿ.

ದೇವರ ಗಂಟನ್ನು ಕದ್ದ ಚಾಜಗಾರ ಕುಳದ ಚನ್ನನನ್ನು ಊರವರು ಶಪಿಸಿದರು. ಮುಂದಿನ ಅವನ ಸಂತಾನ ಏಳುಬೀಳುಗಳಲ್ಲಿ ತೊಳಲಾಡಿ ನಿರ್ನಾಮವಾದ ಕತೆಯನ್ನೇ ಈ ಕೃತಿ ಹೊತ್ತು ನಿಂತಿದೆ.

**ಕುರಿಕೆಂಪಯ್ಯನ ಕೆಮ್ಮು:** ಕುರಿಕೆಂಪಯ್ಯನೆಂಬುವನು ಕುರಿಕಾಯ್ಕೊಂಡು ಪೂಜಾರಿಕೆಯನ್ನೂ ಮಾಡ್ತಿದ್ದ. ಅವನ ಗೂರ್ಲನ್ನು ನೋಡಿ ಜನರು ಹಾಸ್ಯ ಮಾಡುತ್ತಿದ್ದರು. ಎಷ್ಟು ನಿಷ್ಠೆಯಿಂದ ಪೂಜೆ ಮಾಡಿದ್ರೂ ಕೆಮ್ಮನ್ನು ವಾಸಿಮಾಡದ ದೇವರನ್ನು ಕಂಡು ಒಮ್ಮೆ ಕೋಪಬಂತು. ತಣ್ಣೀರಲ್ಲಿ ಮುಳುಗಿ, ಒದ್ದೇಲೇ ವಿಧವಿಧದ ಹೂ ಕೊಯ್ದು ಲಿಂಗಕ್ಕೆ ನೂರೊಂದು ಬಿಂದಿಗೆ ನೀರೆರೆದು, ದೇವರನ್ನು ಹೂವಿಂದ ಅಲಂಕರಿಸಿ, ಒಂದು ಕೈಯಲ್ಲಿ ಧೂಪ ಹಿಡಿದು, ಮತ್ತೊಂದು ಕೈಯಲ್ಲಿ ಗಂಟೆ ಹಿಡಿದು ಪೂಜೆ ಶುರುಮಾಡುತ್ತಿದ್ದಾಗ ಕೆಮ್ಮು ಒತ್ತರಿಸಿ ಬಂದು, ಬಾಯಿತುಂಬ ತೊಂಟೆ ತುಂಬಿಕೊಂಡು ತಡೀಲಾರದೆ ಲಿಂಗದ ಮೇಲೆ ಉಗಿದುಬಿಟ್ಟ... ಅಪರಾಧ ಪ್ರಜ್ಞೆಯಿಂದ ಮತ್ತೆ ಸ್ನಾನಮಾಡಿ ಮಡಿಯುಟ್ಟು ಪೂಜೆಮಾಡಿ ಪ್ರಾಣ ಒಪ್ಪಿಸ್ಕೊ ಅಂತ ಬಿಕ್ಕಳಿಸಿ ಅಳುತ್ತಾ ಪ್ರಜ್ಞೆ ತಪ್ಪಿ, ಸ್ವಲ್ಪ ಸಮಯನಂತರ ಎದ್ದಾಗ ಬಲಗಡೆ ಹೂಬಿತ್ತು' – ಅಂದಿನಿಂದ ಅವನ ಕೆಮ್ಮು ವಾಸಿಯಾಗಿ, ತೆಂಗಿನ ಮರವನ್ನು ಕಾಲ ಮೇಲೆ ಮಾಡಿ ಹತ್ತುವಷ್ಟು ಆರೋಗ್ಯವಂತನಾದ ಎಂಬ ಮಾಹಿತಿ ಪೂಜೆ, ವಿರೋಧ, ಅಪರಾಧ ಪ್ರಜ್ಞೆ ಮತ್ತು ಪಶ್ಚಾತಾಪಗಳಿಗೆ ಕಾಕತಾಳೀಯ ಎಂಬಂತೆ ಕಾಣಿಸಿಕೊಂಡಿದೆ.

**ಗುರುಮಲ್ಲಯ್ಯನವರ ಮಹಾತ್ಮೆ** – ಗುರುಸಿದ್ದಯ್ಯನವರ ಮಗ ಗುರುಮಲ್ಲಯ್ಯನವರು ಸಾತ್ವಿಕರು ಎಲ್ಲರಂತೆ ಬೇಸಾಯ ಮಾಡಿಕೊಂಡು ಸರಳವಾಗಿ ಸಾಧಾರಣ ಮನೆಯಲ್ಲಿ ಕಾಲಹಾಕುತ್ತಿದ್ದರು. ಒಮ್ಮೆ ಇವರು ಹೊಲ ಉಳುತ್ತಿದ್ದಾಗ ಹೆಚ್ಚು ತೇವವಿದ್ದ ಕಡೆ ನೇಗಿಲು ಹೂತುಕೊಂಡಿತು. ಎತ್ತುಗಳು ಎಳೆಯಲಾರದೆ ಮುಂದೆ ಹೆಜ್ಜೆ ಹಾಕುತ್ತಿರಲಿಲ್ಲ. ಗುರುಮಲ್ಲಯ್ಯನವರು ಗ್ರಹಚಾರವಶಾತ್ ಎತ್ತಿಗೆ ಮೆತ್ತಗೆ ಒಂದೇಟು ಕೊಟ್ಟರು. ಅದು ಬಿದ್ದುಬಿಟ್ಟಿತು. ನೋಡಿದರೆ ಸತ್ತೇ ಹೋಗಿದೆ. ಗೋಹತ್ಯೆ ಪಾಪಕ್ಕೆ ಒಳಗಾದೆನಲ್ಲ ಎಂದು ಕೊರಗಿ ಭೂಮಿಗೆ ಇಳಿದುಹೋದರು. ಇಂಥ ಪಾಪ ಮಾಡಿ ಧರೆಮ್ಯಾಲೆ ಇರಬಾರದೆಂದೂ ನಾಲಗೆ ಇರಕೊಂಡು ಪ್ರಾಣಬಿಡ್ತೀನಿ ಎಂದೂ. ಎತ್ತಿಗೆ ಉತ್ತರಕ್ರಿಯೆಯ ಪೂಜೆಮಾಡಿ 'ಶಿವಾ! ನನ್ನಲ್ಲಿ ಸತ್ಯವಿದ್ದರೆ ನನ್ನಾ ಈ ಧರ್ಮದ್ರೋಹದಿಂದ ಕಾಪಾಡು, ಇಲ್ದೇ ಹೋದ್ರೆ ನಾನು ಪ್ರಾಣ ಕಳಕೊಂಡು ಬುಡ್ತೀನಿ... ಎನ್ನುತ್ತಾ ಎತ್ತಿನ ಕಿವಿಯ ಬಳಿ ಹೋಗಿ ಓಂ ನಮಃ ಶಿವಾಯ ಎಂದು ಮೂರು ಸಲ ಉಚ್ಚರಿಸಿದಾಗ ಪವಾಡವೋ ಎಂಬಂತೆ ಎತ್ತು ಮೈ ಒದರಿಕೊಂಡು ಬುದೂರನೆ ಎದ್ದು ನಿಂತಿತು...[೧]

ಈ ಮಹಾತ್ಮೆಗಳು ಕಥೆಯೊಳಗೆ ಕಥೆ ಎಂಬಂತೆ ಬಂದು ಕೃತಿಯ ಸ್ವಾರಸ್ಯವನ್ನು ಹೆಚ್ಚಿಸಿವೆ. ಹಾಗೆಯೇ ಇದೊಂದು ಜನಪದ ನಂಬಿಕೆ ನಡವಳಿಕೆಗೆ ಸಾಕ್ಷಿಪ್ರಜ್ಞೆಯಾಗಿ ನಿಂತಿದೆ. ಇಂತಹ ಪವಾಡಗಳ ಸತ್ಯಾಸತ್ಯತೆಯನ್ನು ಒರೆಗೆ ಹಚ್ಚಲು ಮುಂದಾಗದ ಗ್ರಾಮೀಣರು ಇವುಗಳನ್ನು ಪೋಷಿಸಿಕೊಂಡು, ಗೌರವಿಸಿಕೊಂಡು ಬಂದಿದ್ದಾರೆ. ಇದು ಜನಪದರ ಮುಗ್ಧತೆಯ ಸಂಕೇತವಾಗಿದೆ.

---

೧. ಸೊನ್ನೆಯಿಂದ ಸೊನ್ನೆಗೆ, ಪು. ೫೨, ೫೩, ೫೪

### ೭.೨ ವ್ಯಾಪಾರ; ವ್ಯವಹಾರ ಪದ್ಧತಿ

'ಸೊನ್ನೆಯಿಂದ ಸೊನ್ನೆಗೆ' ಕಾದಂಬರಿ ಬಯಲುಸೀಮೆಯ ಕೃಷಿ ಪ್ರಧಾನವಾದ ಚಿತ್ರವನ್ನು ಕಣ್ಣಿಗೆ ಕಟ್ಟಿಕೊಡುವುದರ ಜೊತೆಗೆ ಅಂದು ಅವರ ಬದುಕಿಗೆ ಮೆಲ್ಲಗೆ ಕಾಲಿಡುತ್ತಿದ್ದ 'ವ್ಯಾಪಾರ', 'ವ್ಯವಹಾರ'ವನ್ನು ಹೇಳುತ್ತದೆ. ಕತೆ ಸುಮಾರು ೧೫೦ ವರ್ಷ ಹಿಂದಿನ ಬದುಕನ್ನು ಹೇಳುತ್ತದೆ. ಹೊಟ್ಟೆಪಾಡಿಗೆ ಭೂಮಿಯನ್ನಲ್ಲದೇ ಬೇರೇನನ್ನೂ ಆಶ್ರಯಿಸದ ಸನ್ನಿವೇಶದ ಚಿತ್ರಣವಿದೆ. ಇಂತಹ ಸಂದರ್ಭದಲ್ಲಿ ವ್ಯವಹಾರ, ವ್ಯಾಪಾರಕ್ಕೆ ಸಂಬಂಧಿಸಿದ ಅನೇಕ ಅಂಶಗಳು ಬೆಳಕಿಗೆ ಬರುತ್ತವೆ.

'ತಿರುಕ ಚನ್ನ' ಬರಿ 'ಚನ್ನ'ನಾಗಿ ಸಂಸಾರವಂದಿಗನಾದ ಮೇಲೆ ಗಾಡಿ, ಎತ್ತುಗಳನ್ನು ಮಾಡಿಕೊಂಡ. ಮೈಲಾರದಲ್ಲಿ ಕೇಳುವವರಿಲ್ಲದ ಸೌದೆಯನ್ನು ಕಡಿದು ಮಂಡ್ಯಕ್ಕೆ ಸಾಗಿಸಿ ಮಾರುತ್ತಿದ್ದ. ಆಗ ಒಂದು ಗಾಡಿ ಸೌದೆಗೆ ಎಂಟಾಣೆ ಸಿಗುತ್ತಿತ್ತು. ಕಾಸು ಚೆನ್ನವಾಗಿದ್ದ ಕಾಲ ಅದು. ದುಡ್ಡು ಎಂದರೆ ನಾಲ್ಕು ಕಾಸು. ಒಂದಾಣೆಗೆ ೧೨ ಕಾಸು, ಅಂದರೆ ಮೂರು ದುಡ್ಡು. ರೂಪಾಯಿಗೆ ೨೫ ಸೇರು ರಾಗಿ, ೫೫ ಸೇರು ಹುರುಳಿ ಸಿಗುತ್ತಿತ್ತು.

'ವ್ಯಾಪಾರಂ ದ್ರವ್ಯ ಚಿಂತನಂ' ಎಂಬುದು ನಿಜ. ಸೌದೆಯನ್ನು ಮಂಡ್ಯದಲ್ಲಿ ಮಾರಿ ಅಲ್ಲಿಂದ ಮೈಸೂರಿಗೆ ತೆರಳಿ ಮೈಲಾರದ ಅಂಗಡಿ ಶೇಷಣ್ಣನಿಗೆ ಬೇಕಾದ ಸಾಮಾನನ್ನು ತರುತ್ತಿದ್ದ. ಮಂಡ್ಯದಿಂದ ಖಾಲಿಗಾಡಿ ಹೋಗುವುದೇಕೆಂದು ರಾಗಿ, ಅವರೇಕಾಳು, ಹುರುಳೀಕಾಳು, ಹುಣಸೇಹಣ್ಣು, ಎಣ್ಣೆಬೀಜಗಳನ್ನು ಹೇರಿಕೊಂಡು ಹೋಗಿ ಮಾರಿದರೆ ಇನ್ನು ಹೆಚ್ಚು ದುಡ್ಡು ಸಿಗಬಹುದೆಂದು ಚಿಂತಿಸಿದ. ಹೀಗೆ ಚನ್ನನ ವ್ಯಾಪಾರದ ಪ್ರಾರಂಭವೂ ಆಯಿತು.

ಅಂದಿನ ಜನಗಳ ಬೇಡಿಕೆಗಳು ಮಿತವಾಗಿದ್ದವು. ಆಹಾರ ಪದಾರ್ಥಗಳಲ್ಲಿ ಮೆಣಸು, ಜೀರಿಗೆ, ಮೆಂತ್ಯ ಉಳಿದಂತೆ ಸೂಜಿ ದಬ್ಬಳವನ್ನು ಮಾತ್ರ ಹೊರಗಡೆಯಿಂದ ತರಿಸುತ್ತಿದ್ದರು. ಬಟ್ಟೆಗಳನ್ನು ಊರಿನ ಹೊಲೆಯರೇ ನೇಯ್ದು ಕೊಡುತ್ತಿದ್ದರು.

ಮೈಲಾರ ಹೀಗೇ ಇರಲಿಲ್ಲ. ಅದರ ಅವಶ್ಯಕತೆಗಳು ಹೆಚ್ಚುತ್ತಾ ಹೋಯಿತು. ಬಟ್ಟೆಬರೆ, ಸೀಮೆಎಣ್ಣೆ, ಸಾಬೂನು, ಲಾಂದ್ರ, ಲಾಟೀನು ಮೊದಲಾದ ಸಾಮಾನುಗಳು ಹಳ್ಳಿಯನ್ನು ಪ್ರವೇಶಿಸಿದವು. ಅಂದು ಹುಣಸೇ ಹಣ್ಣಿಗೆ ಸುಂಕವಿರಲಿಲ್ಲ. ಚಿನ್ನವನ್ನು ತೊಲದಲ್ಲಿ ಲೆಕ್ಕಮಾಡುತ್ತಿದ್ದರು.

ವ್ಯವಸಾಯ ಪ್ರಧಾನವಾದ ಈ ಸಂಸ್ಕೃತಿಯಲ್ಲಿ ಎತ್ತು-ಗಾಡಿಗಳಿಗೆ ಪ್ರಾಮುಖ್ಯತೆಯಿದೆ. ವ್ಯಾಪಾರದಲ್ಲಿ ಚೆನ್ನಾಗಿ ಪಳಗಿದ ಚನ್ನ ಅಭಿವೃದ್ಧಿಯಾಗುವ ಬಯಕೆಯಿಂದ ಹೊಸ ಹೊಸ ವ್ಯಾಪಾರವನ್ನು ಕೈಗೊಂಡ. ಅವುಗಳಲ್ಲಿ ಗಾಡಿ ತರಿಸಿ ಮಾರುವ ವಹಿವಾಟೂ ಒಂದು. ಹುಣಸೂರಿಗೆ ಹೋಗಿ ತೇಗದ ಗಾಡಿಯನ್ನು ಸ್ವಂತದ ಉಪಯೋಗಕ್ಕೂ ಮಾರಟಕ್ಕೆಂದು

ಇನ್ನೊಂದು ಗಾಡಿಯನ್ನೂ ತಂದು ಮಾರಿದ. ಇದರಿಂದ ೨೦ ರೂ. ಲಾಭ ಕಂಡು ಆಗಾಗ್ಗೆ ಗಾಡಿ ತರಿಸಿ ಮಾರುವ ವಹಿವಾಟನ್ನು ನಡೆಸುತ್ತಿದ್ದ.

**ರಾಸುಗಳ ವ್ಯಾಪಾರ:** ದನಕರುಗಳು ಖಾಸಗಿ ಸಂಪತ್ತಾಗಿ ಪರಿಣಮಿಸಿದ ಮೇಲೆ ಅವುಗಳನ್ನು ಕೊಡುವ– ಕೊಳ್ಳುವ ವಹಿವಾಟು ಚಾಲ್ತಿಯಲ್ಲಿತ್ತು. ಕೊಳ್ಳೆಗಾಲದ ಕಡೆಯಿಂದ ದನಗಳು ಮಾರಾಟಕ್ಕೆ ಬರುತ್ತಿದ್ದವು. ಹತ್ತಾರು ರಾಸುಗಳನ್ನು ಕೊಂಡು ಸಾಕಿ, ಸ್ವಲ್ಪದಿನ ಕಳೆದು ಮಾರುತ್ತಿದ್ದ. ಅದರಿಂದ ರಾಸಿಗೆ ೫–೧೦ ರೂಪಾಯಿ ಲಾಭ ಸಿಗುತ್ತಿತ್ತು.

ಇಷ್ಟಲ್ಲದೇ ಚನ್ನೇಗೌಡರು ಲೇವಾದೇವಿ ವ್ಯವಹಾರವನ್ನು ನಡೆಸುತ್ತಿದ್ದರು. 'ಸಿಗರೇಟು ಎಂಬ ಹೊಸ ಮಾಲು ಅನುಕೂಲಸ್ಥರ ಅರ್ಧಾಂಗಿನಿಯಾಗಿ ಬಂದಿತು'[೧] ಎಂಬುದನ್ನು ಗಮನಿಸಿದರೆ ಅದು ಎಷ್ಟು ಅರ್ವಾಚೀನ ಪದಾರ್ಥವೆಂದು ಮನವರಿಕೆಯಾಗುತ್ತದೆ.

ಹೈದರಾಲಿ –ಫ್ರೆಂಚರ ಮಿತ್ರತ್ವದ ಕಾರಣದಿಂದ ಮೈಸೂರಿಗೆ ಹಿಪ್ಪುನೇರಳೆ ಬೆಳೆ ಬಂದು ಅದು ಮೈಲಾರವನ್ನೂ ಪ್ರವೇಶಿಸಿ ಅದನ್ನು ಕೊಳ್ಳಲು ಸಾಬರು ಬರುತ್ತಿದುದನ್ನು ಈ ಕೃತಿ ದಾಖಲಿಸುತ್ತದೆ. ಆ ರೇಷ್ಮೆಗೂಡುಗಳು ಚನ್ನಪಟ್ಟಣಕ್ಕೆ ಸಾಗಿಸಲ್ಪಡುತ್ತಿದ್ದವು. ಈಗಲೂ ಚನ್ನಪಟ್ಟಣದಲ್ಲಿ ರೇಷ್ಮೆ ಮಾರುಕಟ್ಟೆ ಇರುವುದನ್ನು ಗಮನಿಸಬಹುದು.

ಕಾದಂಬರಿಯಲ್ಲಿ 'ವ್ಯಾಪಾರ'ಪದ್ಧತಿ ಹೊಸದೆಂಬಂತೆ ಕಾಣಿಸಿಕೊಂಡರೂ ಕ್ರಮೇಣ ಕೃತಿಯನ್ನು ಆವರಿಸಿಬಿಡುತ್ತದೆ. ಇದರಿಂದ ೧೫೦ ವರ್ಷಗಳ ಹಿಂದಿನ ಆರ್ಥಿಕ ಪರಿಸ್ಥಿತಿಗೆ ಸಂಬಂಧಿಸಿದ ಅನೇಕ ಮಹತ್ವಪೂರ್ಣ ವಿಚಾರಗಳು ತಿಳಿದುಬರುತ್ತವೆ.

### ೭.೩. ರೈತ ಮತ್ತು ಭೂಮಿ

ರೈತ ಮತ್ತು ಭೂಮಿಯ ನಡುವಿನ ಸಂಬಂಧವನ್ನು ಗುರುತಿಸಲು ಹೊರಡುವುದು ಮೇಲುನೋಟಕ್ಕೆ ಒಂದು ಬಗೆಯ ಅಸಹಜತೆಯ ಅಥವಾ ವಿರೋಧಾಭಾಸದ ಹಾಗೆ ಕಾಣಬಹುದು. ರೈತನು ಜೀವನ ವಿಧಾನದಲ್ಲಿ ತನ್ನ ಪರಿಕರಗಳ ಬಗ್ಗೆ ಇರಿಸಿಕೊಂಡಿರುವ ನಂಬಿಕೆ, ನಿಷ್ಠೆಗಳಲ್ಲಿ ಇತ್ತೀಚೆಗಷ್ಟೆ ವ್ಯತ್ಯಾಸಗಳು ತಲೆದೋರಿರುವುದರಿಂದ ಹಿಂದಿನ ರೈತ ಭೂಮಿಯ ಬಗ್ಗೆ ಇರಿಸಿಕೊಂಡಿದ್ದ ಜಾನಪದ ತಿಳಿವಳಿಕೆಯನ್ನು ಗುರುತಿಸಿ ದಾಖಲಿಸಿ ವಿಶ್ಲೇಷಿಸುವುದು ಅಗತ್ಯ.

ರೈತ ಮತ್ತು ಭೂಮಿಯ ಸಂಬಂಧ ಅವಿನಾಭಾವದಿಂದ ಕೂಡಿರುವುದಾಗಿದೆ. ರೈತನನ್ನು ಬಿಟ್ಟು ಭೂಮಿಯನ್ನು, ಭೂಮಿಯನ್ನು ಬಿಟ್ಟು ರೈತನನ್ನು ಕಲ್ಪಿಸಿಕೊಳ್ಳುವುದು ಕಷ್ಟ. ಭಾರತೀಯ ಸಂಪ್ರದಾಯದಲ್ಲಿ ಭೂಮಿಯಲ್ಲಿ ಮಾತೃಸ್ವರೂಪವನ್ನು ಕಾಣಲಾಗಿದೆ. ಅವಳನ್ನು

---

೧. ಸೊನ್ನೆಯಿಂದ ಸೊನ್ನೆಗೆ, ಪು. ೧೬೮

'ಭೂಮಿತಾಯಿ' ಎಂದೇ ಸಂಬೋಧಿಸುತ್ತಾರೆ.[೧] ಗ್ರಾಮೀಣರಲ್ಲಿ ಬೆಲೆಬಾಳುವ ಚಿನ್ನಬೆಳ್ಳಿಗಿಂತಲೂ ಅಮೂಲ್ಯವಾದುದು ಭೂಮಿ. ಕೃತಿಯಲ್ಲಿ ಧೂಪದ ಚನ್ನೇಗೌಡ ತನಗೆ ಸಿಕ್ಕಿದ ಚಿನ್ನದಿಂದ ಭೂಮಿಯನ್ನು ಕೊಂಡುಕೊಳ್ಳುವುದನ್ನು ಗಮನಿಸಬಹುದು. ಬಾಹ್ಯದ ಬಣ್ಣದ ಬದುಕನ್ನು ನೆಚ್ಚದೆ ಹೊಟ್ಟೆಪಾಡಿಗೆ ಇದ್ದುದರಲ್ಲಿ ಶಾಶ್ವತವಾದುದನ್ನು ನೆಚ್ಚುತ್ತಿದ್ದರು. ಚನ್ನೇಗೌಡರು ಎಲ್ಲಿ ಸಿಕ್ಕಿದರೂ ಎಷ್ಟಕ್ಕೆ ಸಿಕ್ಕಿದರೂ ಅವರು ಭೂಮಿಯನ್ನು ಕೊಳ್ಳುವ ಪರಿಯನ್ನು ನೋಡಿದರೆ ಭೂಮಿಗೆ ಕೊಡುವ ಮಹತ್ವ ತಿಳಿಯುತ್ತದೆ.[೨] ನಮ್ಮಲ್ಲಿ ಅಸಂಖ್ಯ ದೇವತೆಗಳಿದ್ದರೂ ಅವರ ನಡುವೆ 'ಭೂಮಿತಾಯಿ'ಯ ಸ್ಥಾನ ವಿಶಿಷ್ಟವಾದುದು. ನಿಷ್ಠೆಯಿಂದ ಅವಳ ಸೇವೆ ಮಾಡಿದರೆ 'ಕೈಯೆತ್ತಿ' ಕೊಡುತ್ತಾಳೆ ಎಂಬ ಭಾವನೆ ಜನಪದರಲ್ಲಿ ಬೇರೂರಿದೆ.

### ೭.೪ ಹರಕೆ, ಹಬ್ಬಗಳು

ಹರಕೆ–ಹಬ್ಬಗಳು ಜನಪದರ ದೃಷ್ಟಿಯಲ್ಲಿ ಮಹತ್ತರವಾದ ವಿಚಾರಗಳು. ಅವುಗಳ ಆಚರಣೆ ಅವರ ಮನಸ್ಸನ್ನು ಮುದಗೊಳಿಸುತ್ತವೆ. ದೇವರಿಗೆ ಅವರು ಹೊತ್ತ ಹರಕೆಯನ್ನು ಶತಾಯಗತಾಯ ತೀರಿಸುತ್ತಾರೆ. 'ಹರಕೆ ಹನ್ನೆರಡು ವರ್ಷ' ಎಂಬಂತೆ ಅದನ್ನು ಅಷ್ಟರೊಳಗೆ ಸಲ್ಲಿಸದಿದ್ದರೆ ದೇವರು ಕಾಡುತ್ತಾನೆಂಬ ಭಯವಿದೆ. ಹರಕೆಗಳ ಮನೋವಿಶ್ಲೇಷಣಾತ್ಮಕ ಮಹತ್ವವನ್ನು ಗಮನಿಸುವಾಗ ಜನಪದರು ತಮ್ಮ ಮಾನಸಿಕ ತೊಳಲಾಟದ ಅಸಮತೋಲನವನ್ನು ಸರಿದೂಗಿಸಿಕೊಳ್ಳಲು ಕಂಡುಕೊಂಡ ಪರಿಹಾರಗಳೆಂದು ಭಾಸವಾಗುತ್ತದೆ.

ದೇವರ ಹರಕೆಯನ್ನು ಸಲ್ಲಿಸುವಾಗ ಚಿನ್ನ ಬೆಳ್ಳಿಯ ಪಾತ್ರ ಹಿರಿದಾದುದು. ಕಾದಂಬರಿಯಲ್ಲಿ ದೇವಸ್ಥಾನ ಊರ್ಜಿತಕ್ಕೆ ಮನೇಲಿರೋ ಹರಕೆ ಹಾಡ್ಯ[೩] ಮುಡುಪು ತರಲು ಸಾರಿದ್ದನ್ನು ಗಮನಿಸಬಹುದು.

ಹರಕೆಗಳನ್ನು ಕಟ್ಟುವುದರಲ್ಲಿ ಹೆಂಗಸರ ಪಾತ್ರ ಅಧಿಕ. ಕಾಯಿಲೆ ಕಸಾಲೆ ಬಿದ್ದಾಗ, ಹೆತ್ತಾಗ–ಸತ್ತಾಗ, ಹೆಂಗಸರು ಕಟ್ಟುವ 'ಹೊನ್ನೆಸಳು'[೪] ಮುಖ್ಯವಾದುದು. ನಿಲಕ್ಕೆ ಕಟ್ಟಿರೋ ಕಡಗ, ಕೈಮುರಿ, ತಾಳಿಗಳು ಹರಕೆಯ ಸಾಮಾನುಗಳಾಗಿವೆ.

ಮಕ್ಕಳಿಲ್ಲದವರು ಗಂಡುಮಕ್ಕಳಾದ್ರೆ ತುಪ್ಪದ ಕಜ್ಜಾಯದ ನೈವೇದ್ಯ ಮಾಡಿಸ್ತೀನಿ ಎಂತಲೂ ಮೊದಲ ಮಗನಿಗೆ ನಿನ್ನ ಹೆಸರಿಡ್ತೀನಿ ಎಂತಲೂ ಹರಕೆ ಕಟ್ಟುವ ಪರಿಯೂ ಇದೆ.[೧]

---

೧. ಸೊನ್ನೆಯಿಂದ ಸೊನ್ನೆಗೆ, ಪು. ೧೫೪

೨. ಅದೇ, ಪು. ೧೬೯

೩. ಹರಕೆ ಹಾಡ್ಯ : ಮನೆಗಿನೆ ಎಂಬಂತೆ ಒಂದು ಜೋಡಿಪದ.

೪. ರೋಗರುಜಿನ ಕಷ್ಟ ಮುಂತಾದವುಗಳ ನಿವಾರಣೆಗಾಗಿ ದೇವರನ್ನು ಪ್ರಾರ್ಥಿಸಿಕೊಂಡು ಬೆಳ್ಳಿಯ ನಾಣ್ಯವನ್ನು ಅರಿಶಿನದ ಅರಿವೆಯಲ್ಲಿ ಮುಡುಪು ಕಟ್ಟುವುದು. ಇದನ್ನು ಸಾಮಾನ್ಯವಾಗಿ ಪರಿಶುದ್ಧವಾದ ಜಾಗದಲ್ಲಿ ಯಾರಿಗೂ ಎಟುಕದಂತೆ, ಉದಾಹರಣೆಗೆ ಹಾಲು ಮೊಸರು ಇಡುವ ನೆಲ್ಲಿಕಾಲಿಗೆ ಅಥವಾ ನೆಲುವಿಗೆ ಕಟ್ಟುತ್ತಾರೆ.

ಇಷ್ಟೆ ಅಲ್ಲದೆ ಹಿಂದಿನ ಪಾಪ ಪರಿಹಾರಕ್ಕೆ ತಪ್ಪು ಕಾಣಿಕೆ ಸಲ್ಲಿಸುವ ರೀತಿಯಲ್ಲಿ ದೇವರ ಸೇವೆ ಮಾಡುವುದನ್ನು ಕಾಣಬಹುದು. ಕುಂಡಪ್ಪ ತನ್ನ ಅಣ್ಣನ ಮಗ ಚನ್ನನಿಗೆ 'ಮೈಲಾರ ಲಿಂಗನ ಗುಡಿ ಕಟ್ಟಿಸಿ, ಹೊಸ ಲಿಂಗ ತಂದಿರಿಸಿ, ಅಭಿಷೇಕ ಮಾಡ್ಸು' ಎಂದು ಹೇಳಿದುದರಲ್ಲಿ ಹಿಂದಿನ ಪಾಪ ಪರಿಹಾರ ಮಾಡಿಕೊಳ್ಳುವ ಅಭಿಲಾಷೆಯನ್ನು ಕಾಣುತ್ತೇವೆ.

ಗ್ರಾಮೀಣರ ಹಬ್ಬಗಳ ಆಚರಣೆಯಲ್ಲಿ ವಿಶಿಷ್ಟತೆಯಿದೆ. ಭೂಸಂಬಂಧಿಯಾದ ಹಬ್ಬಗಳು ಹೆಚ್ಚು ಆಚರಣೆಯಲ್ಲಿವೆ. ಚಳಿಗಾಲವೊಂದನ್ನು ಬಿಟ್ಟರೆ ಉಳಿದ ಋತುಮಾನಗಳಲ್ಲಿ ಹಬ್ಬಗಳು ಬರುತ್ತವೆ. ಬೇಸಿಗೆಯಲ್ಲಿ ಇನ್ನೂ ಹೆಚ್ಚು. 'ಯಾಕಾಸಿ (ಏಕಾದಶಿ) ಹಬ್ಬ ದೇಶಕ್ಕೆ ದೊಡ್ಡಬ್ಬ.'[೨] ಅಂದು ಮಡಿ ಉಟ್ಟು ಉಪವಾಸ ಇದ್ದು ಈ ಹಬ್ಬಕೆಂದು ಸಿದ್ಧವಾದ ಹಲಸಿನ ತೊಳೆ ಫಲಹಾರ ತಿಂದು ಇರುವ ದಿನ. ಇದಲ್ಲದೆ ಮಾರಮ್ಮನ ಉತ್ಸವ, ಬೋರಪ್ಪನ ಜಾತ್ರೆ ಹೆಚ್ಚು ಪ್ರಸಿದ್ಧವಾದ ಹಬ್ಬಗಳಾಗಿವೆ.

'ಮಂಗ್ಳಾರ ಮಾರಮ್ಮನ ಹೊಂಡುಸ್ತಾರಂತೆ' ಎಂದು ಸಾರಿಸುವ ಪದ್ಧತಿಯಿದೆ. ವರ್ಷದಲ್ಲಿ ಒಂದು ದಿನ ಮಾರಮ್ಮನಿಗೆ ಆರತಿಮಾಡಿ, ಅಲಂಕಾರಮಾಡಿ ಹಡ್ಡೆಗಳ[೩] ಮೇಲೆ ಹೊತ್ತುಕೊಂಡು ಮುಂದೆ ಸ್ವಾಮ[೪]ಗಳನ್ನು ಕುಣಿಸಿಕೊಂಡು ರಂಗದಲ್ಲಿ ಇಡೀ ರಾತ್ರಿ ಮೆರೆಸಿವ ಪದ್ಧತಿಯಿದೆ. ಹೊಲೆಯರ ದೋಣು,[೫] ದಬಾನ, ಹರೆ ತಮಟೆಗಳ ಮತ್ತು ಹಜಾಮರ ಓಲಗಗಳಿಲ್ಲದೆ ಉತ್ಸವಗಳು ಸಾಗುವುದೇ ಇಲ್ಲ. ಇಂತಹ ಹಬ್ಬಗಳಲ್ಲಿ ಆಬಾಲವೃದ್ಧ-ರಾದಿಯಾಗಿ ಎಲ್ಲರೂ ಪಾಲ್ಗೊಂಡು ನಲಿಯುತ್ತಾರೆ.

ಮಾರಮ್ಮನಿಗೆ ತಂಬಿಟ್ಟಿನ ಆರತಿಯೇ ಆಗಬೇಕು. ಅಕ್ಕಿ ಹುರಿದು ಬೀಸಿ ಹಿಟ್ಟುಮಾಡಿ ಬೆಲ್ಲದ ಪಾಕದಿಂದ ಕಲೆಸಿ ಅದನ್ನು ಗುಂಡಗೆ ಸಣ್ಣ ಗುಂಡಕಲ್ಲಿನ ಹಾಗೆ ತಟ್ಟಿ ನಿಲ್ಲಿಸಿ, ಅದರ ಮೇಲೆ ಹಳ್ಳೆಣ್ಣೆಯ ಕೈ ಹಣತೆ ಹಚ್ಚಿಟ್ಟು ಸುತ್ತಾ ಹಂಚಿಕಡ್ಡಿ ಸಿಕ್ಕಿಸಿ ಅದಕ್ಕೆ ಕಣಗಲು ಹೂಗಳನ್ನು ಪೋಣಿಸಿ ಎಲ್ಲರೂ ಒಟ್ಟಾಗಿ ಹೋಗುವ ಸಂಪ್ರದಾಯವಿದೆ.

ಹಬ್ಬಗಳು ಜನಪದರ ಬಿಡುವಿಲ್ಲದ ದುಡಿತದಲ್ಲಿ ವಿರಾಮದ ಕ್ಷಣಗಳು. ಇಂದಿಗೂ ಗ್ರಾಮೀಣರು ಹಬ್ಬಗಳ ಆಚರಣೆಯಲ್ಲಿ ದೇಸಿತನವನ್ನು ಬಿಟ್ಟುಕೊಟ್ಟಿಲ್ಲ. ಹಳ್ಳಿಗಳಲ್ಲಿ ಹಬ್ಬವೆಂದರೆ

---

೧. ಸೊನ್ನೆಯಿಂದ ಸೊನ್ನೆಗೆ, ಪು. ೨೪

೨. ಅದೇ, ಪು. ೬೦

೩. ಹಡ್ಡೆ – ಅಡ್ಡೆ : ಅಡ್ಡಡ್ಡವಾಗಿ ೪ ಗಳುಗಳನ್ನು ಕಟ್ಟಿ, ಅದರಲ್ಲಿ ದೇವರ ಮೂರ್ತಿಯನ್ನು ಕೂಡಿಸಿ ನಾಲ್ಕು ಜನರು ಹೆಗಲ ಮೇಲೆ ಹೊರುವಂತೆ ಮಾಡಿದ ಚೌಕಟ್ಟು.

೪. ಸ್ವಾಮ – ಚಾಮ – ಸೋಮ ; ಇದೊಂದು ಮರದ ಮುಖವಾಡ. ಇದನ್ನು ರಕ್ತ ಬೂತಾಳೆ ಮರದಿಂದ ಮಾಡುತ್ತಾರೆ (೫, ೬ ವಿಷಯದ ಚಿತ್ರಗಳನ್ನು ನಿಬಂಧದ ಕೊನೆಯಲ್ಲಿ ಕೋರಲಾಗಿದೆ).

೫. ದೋಣು : ಡೊಳ್ಳನ್ನು ಹೋಲುವ ಒಂದು ದೊಡ್ಡ ಚರ್ಮವಾದ್ಯ.

ಎಲ್ಲ ಜಾತಿಯವರೂ ಸೇರಿ, ಒಂದಾಗಿ ನಲಿಯುವ ದಿನ. ಆ ಕಾರಣದಿಂದಾಗಿಯೇ ಇವುಗಳಿಗೆ ಮೆರಗು ಹೆಚ್ಚಿದೆ.

**೭.೫ ರೈತಾಪಿ ಸಂಸಾರದ ಗೀತೋಪದೇಶ**

ಎಚ್.ಎಲ್.ನಾಗೇಗೌಡರು ರೈತಾಪಿ ಜೀವನವನ್ನು ಎಷ್ಟು ಸೂಕ್ಷ್ಮವಾಗಿ ಅವಲೋಕಿಸಿದ್ದರು ಎಂಬುದಕ್ಕೆ ಪರಮಶ್ರೇಷ್ಠ ಉದಾಹರಣೆ ಕೃತಿಯಲ್ಲಿನ ಒಂದು ಅಧ್ಯಾಯ 'ರೈತರ ಬಾಳಿನ ಗೀತೋಪದೇಶ' ಎಂಬುದು. ಇಲ್ಲಿ ಮಲ್ಲೇಗೌಡರು ಚನ್ನನಿಗೆ ಹೇಳುವ ಬೇಸಾಯದ ವಿಚಾರಗಳು ರೈತನಿಗೆ ಕೈಪಿಡಿಯಂತಿದ್ದರೆ, ಅತ್ತ ಆತನ ಹೆಂಡತಿ ಚೌಡಿಗೆ ಗೌಡರ ಹೆಂಡತಿ ತಿಮ್ಮಾಜಮ್ಮ ಹೇಳುವ ಬುದ್ಧಿಮಾತುಗಳು ಶುದ್ಧ ಗರತಿ ತತ್ವವನ್ನು ಸಾರುತ್ತವೆ.

ರೈತನಾದವನಿಗೆ ಎತ್ತು, ನೇಗಿಲು, ನೊಗ ಸರ್ವಸ್ವವಾದ ಹಾಗೆ ಒಬ್ಬ ಗರತಿಗೆ ಸಂಸಾರ, ಅದರ ಆಗುಹೋಗುಗಳು ಸರ್ವಸ್ವವಾಗಬೇಕು. ಹಾಗಾಗಿ ಈ ಅಧ್ಯಾಯದಲ್ಲಿ ಮರೆಯಾಗುತ್ತಿರುವ ಮರೆಯಾಗಿರುವ ಅನೇಕ ಸಾಮಗ್ರಿಗಳನ್ನು ಹೆಸರಿಸುತ್ತಾರೆ. ಉದಾಹರಣೆಗೆ ಎಡಗುಡಾಣ,[೧] (ನೀರು ತುಂಬಲು ಮತ್ತು ಕಾಯಿಸುವುದಕ್ಕೆ) ಮೊಗೆ, ಕರೆಗಡಿಗೆ, ಮಿಳ್ಳೆ, ಮುಚ್ಚಳ, ಎಡಮಡಕೆ, ಸೊಡಲು, ಮಕ್ಕರಿ, ಕುಕ್ಕೆ, ಚಿಬ್ಬಲು, ಎಲೆಕವಳಿಗೆ, ಧೂಪುಂಡಿಗೆ... ಇತ್ಯಾದಿಗಳು. ಇಂದಿನ ಪ್ಲಾಸ್ಟಿಕ್ ಪ್ರಪಂಚದಲ್ಲಿ ಇವುಗಳನ್ನು ವಸ್ತುಸಂಗ್ರಹಾಲಯದಲ್ಲಿ ನೋಡುವ ಸ್ಥಿತಿ ಬಂದೊದಗಿರುವುದು ನಮ್ಮ ದುರ್ದೈವ.

ತಿಮ್ಮಾಜಮ್ಮ ಚೌಡಿಗೆ ತಲೆಬಗಿದು ಹೇನುಕುಕ್ಕುತ್ತ ಗರತಿಯಸೂತ್ರಗಳನ್ನು ಉಪದೇಶಿಸುವ ದೃಶ್ಯವಂತೂ ಶುದ್ಧ ಗ್ರಾಮೀಣ ಚಿತ್ರವನ್ನು ಕಡೆದು ನಿಲ್ಲಿಸುತ್ತದೆ. ಗಂಡನಿಗೆ ಊಟಕ್ಕಿಕ್ಕುವುದು, ನಂಟ್ರು ಹೆತ್ರರನ್ನು ನೋಡಿಕೊಳ್ಳುವುದು, ಅಡುಗೆಮನೆ ಸಾರಿಸಿ ಗುಡಿಸುವುದು ಮೊದಲಾದ ವಿಚಾರಗಳೆಲ್ಲವನ್ನೂ ಬಿಡದೆ ಹೇಳಿ ಆಕೆಯನ್ನು ತಿದ್ದುವ ದೃಶ್ಯ ಸ್ವಾರಸ್ಯಕರವಾಗಿದೆ. ಇಂದಿನ ಬದಲಾದ ಯಾಂತ್ರಿಕ ಸಮಾಜಕ್ಕೆ ಅಪ್ರಸ್ತುತ ಎನಿಸಿದ ವಿಚಾರಗಳಿದ್ದರೂ ಅಂದಿನ ಜನಜೀವನ ಇದರಿಂದ ಅನಾವರಣಗೊಂಡಿದೆ. 'ಪರುಸೊತ್ತಾಗಿದ್ದಾಗ ಕೋಣೆಮನೆ ಗುಡಿಸಿ ಪಾತ್ರೆ ಪರಟೆ ತೊಳ್ದು ದುಂಬುದುಸಿ ಹಾರಿಸಿ ಕುಕ್ಕೆ ಮೊರ ತಾರಿಸಿ ಒಪ್ಪವಾಗಿಡಬೇಕು' ಎಂಬ ಮಾತುಗಳು ಸದ್ಯ ಗ್ರಾಮೀಣ ಸ್ತ್ರೀಯ ತಪ್ಪದ ಕೆಲಸಗಳೇ ಆಗಿ ನಿಂತಿವೆ.

ಮುಂಜಾನೆಯಿಂದ ಸಂಜೆಯವರಿಗೆ ಅಂದರೆ ಸೊಪ್ಪು ನೀರು ತರುವ ಹೊತ್ತಿನವರೆಗಿನ ಎಲ್ಲಾ ಮಾತುಗಳನ್ನೂ ಆಲಿಸಿ ಚೌಡಿಯ ತಲೆಯಲ್ಲಿ ನೆಲೆಯೂರಿ ನಿಂತಂತೆ ಅವು ಕೃತಿಯಲ್ಲಿ ಸ್ಥಾಪಿತಗೊಂಡು ಓದುಗನನ್ನು ಸೆಳೆದಿವೆ.

---

೧. ಮಧ್ಯಮಗಾತ್ರದ ಮಡಕೆ.

'ಕೀರೆ ಹರಿವೆ ಹಾಗಲ ಪಡುವಲ ಮೂಲಂಗಿ ಬೀಜಾದ ನಾನ್ಹೇಳಿದಂಗೆ ಮಾಡಿ ತೆಂಗಿನ ಬುರಡೆ ಒಳಗ್ಹಾಕಿಡಬೇಕು' ಎಂಬಲ್ಲಿ ಕೃಷಿ ತಂತ್ರಜ್ಞಾನ. ಬೀಜ ಸಂಸ್ಕರಣ ವಿಚಾರ ತಿಳಿದುಬಂದಿದ್ದು, ಅದು ಗೃಹಿಣಿಯಾದವಳು ಮಾಡಬೇಕಾದ ಕೆಲಸ ಎಂದು ಈ ಮೂಲಕ ವೇದ್ಯವಾಗುತ್ತದೆ. 'ಹೊಲದಲಿ ಗಂಡ್ಸಾಗಬೇಕು – ಮನೇಲಿ ಹೆಂಗ್ಸಾಗಬೇಕು – ಗಂಡನೊಂದಿಗೆ ಕಾಸೆ ಕಟ್ಟಿಕೊಂಡು ಗೆಯ್ಬೇಕು' ಎಂಬುದು ಬೇಸಾಯದಲ್ಲಿ ಸ್ತ್ರೀಯರು ತೊಡಗಿಕೊಳ್ಳುತ್ತಿದ್ದು, ಅದಕ್ಕೆ ಅದರ ಅನಿವಾರ್ಯತೆಯನ್ನು ಸೂಚಿಸುತ್ತದೆ. ಬೇರೆ ಎಲ್ಲ ರೀತಿಯಲ್ಲಿ ಗಂಡು–ಹೆಣ್ಣಿಗೆ ವ್ಯತ್ಯಾಸಗಳಿದ್ದರೂ ಹೊಲದಲ್ಲಿ 'ದುಡಿಯುವ' ವಿಚಾರದಲ್ಲಿ ಅವರು 'ಒಂದೇ' ಆಗುವ ಪ್ರಕ್ರಿಯೆಯನ್ನು ಗಮನಿಸಬಹುದು.

ಬೇರೆಯವರಿಗೆ ಶುಕ್ರವಾರ, ಮಂಗಳವಾರ, ಸಂಜೆ ಹೊತ್ತಲ್ಲಿ ಏನನ್ನೂ ಅದರಲ್ಲಿ ಅರಿಶಿನ ಸೀಗೆಕಾಯಿ ಕೊಡಬಾರದೆಂಬ ಪದ್ಧತಿಯಿತ್ತು. ಸಂಜೆ ಹೊತ್ತು ಲಕ್ಷ್ಮಿ ಮನೆಗೆ ಕಾಲಿಡುವ ಸಮಯ. ಅಂತಹ ಸಂದರ್ಭದಲ್ಲಿ ಹೊರಗಿನವರಿಗೆ ಕೊಟ್ಟರೆ ಲಕ್ಷ್ಮಿ ಹೊರಟು ಹೋಗುತ್ತಾಳೆ ಎಂಬ ನಂಬಿಕೆ ಇದಕ್ಕೆ ಕಾರಣ. ಇಂತಹ ಸಂಪ್ರದಾಯಗಳ ಹಿಂದೆ ವೈಜ್ಞಾನಿಕ ಕಾರಣಗಳು ಇರುವುದಿಲ್ಲ.

ಇಂತಹ ಗ್ರಾಮೀಣ ಚಿತ್ರಗಳು ಆಧುನಿಕತೆ, ವಿದ್ಯಾಭ್ಯಾಸ, ವೈಚಾರಿಕತೆ ಮೊದಲಾದ ಪ್ರಗತಿಯಿಂದ ಮರೆಯಾಗಿವೆ. ಕೆಲವೊಂದು ಸಂಪ್ರದಾಯಗಳು ನಮ್ಮಿಂದ ದೂರಾಗಿರುವುದು ಸ್ವಾಗತಾರ್ಹವಾದರೂ ಅರ್ಥಪೂರ್ಣವಾದ ರೂಢಿಗಳನ್ನು ಉಳಿಸಿಕೊಳ್ಳುವುದರಲ್ಲಿ ಸಂಸ್ಕೃತಿಯ ಸೊಗಡಿದೆ.

––

## ಅಧ್ಯಾಯ : ಎಂಟು

# ರೋಗ ಮತ್ತು ಜಾನಪದ

ನೀರಿನ ನೇರ ಸಂಪರ್ಕದಿಂದ ಉಂಟಾಗುವ ಕಾಲರಾ, ಪ್ಲೇಗು ರೋಗಗಳು ಅಂದಿನ ಕಾಲದಲ್ಲಿ ಕಾಣಿಸಿಕೊಂಡು, ಮೇಲಿಂದ ಮೇಲೆ ವಾಂತಿಭೇದಿಗೆ ತುತ್ತಾಗಿ ಜನಗಳು ದಂಡಿದಂಡಿಯಾಗಿ ಸಾಯುತ್ತಿದ್ದರು.

ಮೈಸೂರು ಭಾಗದಲ್ಲಿ ಈ ರೋಗ ೧೮೧೮ರಲ್ಲಿಯೇ ತಲೆದೋರಿತ್ತೆಂದು ಶಾಸನಾಧಾರ ದಿಂದ ಖಚಿತವಾಗಿ ಹೇಳಬಹುದು. ಈ ಕುರಿತ ಶಾಸನ ಮಂಡ್ಯ ಜಿಲ್ಲೆ, ಪಾಂಡವಪುರ ತಾಲೂಕು ಕನ್ನಂಬಾಡಿಯ ಮಹಾಲಕ್ಷ್ಮಿ ದೇವಾಲಯದ ಎರಡನೇ ಬಾಗಿಲಿನ ಉತ್ತರ ಭಾಗದ ಗೋಡೆಯ ಕಲ್ಲಿನ ಮೇಲಿದ್ದು ಅದರ ಕಾಲ ಕ್ರಿ.ಶ.೧೮೧೮ ಆಗಿದೆ. ಇದು ಕಾಲರಾ ಕುರಿತ ಅಧಿಕೃತ ದಾಖಲೆ. ಮೈಸೂರು ಭಾಗದಲ್ಲಿ ಮೊದಲಬಾರಿ ಈ ರೋಗ ಕಾಣಿಸಿಕೊಂಡಾಗ ಜನಸಮುದಾಯದಲ್ಲಿ ಉಂಟಾದ ತಲ್ಲಣ ತಳಮಳಗಳನ್ನು ಶಾಸನ ದಾಖಲಿಸಿದೆ.

ಪ್ಲೇಗು, ಕಾಲರಾ ಮೊದಲಾದ ಸೋಂಕು ರೋಗವನ್ನು ಗ್ರಹಿಸುವ ರೀತಿ ಭಿನ್ನವಾದುದು. 'ಪ್ಲೇಗ್‌ಮಾರಿ' ಎಂತಲೇ ಕರೆಯುತ್ತಿದ್ದರು. 'ಮಾರಿ' ಎಂಬುದಕ್ಕೆ ರೋಗ ಎನ್ನುವ ಅರ್ಥ ರೂಢಿಯಲ್ಲಿದೆ. ಸಿಡುಬು, ಕಾಲರ, ಪ್ಲೇಗುಗಳನ್ನು 'ಮಾರಿ ರೋಗ' ಎಂತಲೇ ಕರೆಯುತ್ತಿದ್ದರು. ಈ ರೋಗಕ್ಕೆ ಯಾವುದೋ ಗ್ರಾಮದೇವತೆಯೇ ಕಾರಣ ಎಂಬ ಭಯದಿಂದ, ಅವಳ ಕೋಪತಾಪ ಶಮನಕ್ಕೆ ಅವಳನ್ನು ಅರ್ಚಿಸಿ ಶಾಂತಿ ಮಾಡುತ್ತಿದ್ದರು.[೧] ಅದರಂತೆ 'ಅಮ್ಮನಪೂಜೆ' ಮಾಡಿ ರೋಗಬರದಂತೆ ಕಾಪಾಡಬಹುದೆಂದು ನಂಬಿದ್ದರು. ಆ ದಿನ ಮಾರಮ್ಮನನ್ನು ಅಲಂಕರಿಸಿ ಊರಿನ ಈಶಾನ್ಯಮೂಲೆಯಲ್ಲಿ ಮಡಗಿಸಿ ಚಪ್ಪರಹಾಕಿಸಿ ತಂಪು ತೋರಿಸುತ್ತಾರೆ. ಎರಡನೆಯ ದಿನ ಎಂಟು ದಿಕ್ಕಿನಲ್ಲೂ ಎಂಟು ಮರಿ ಕಡಿಸುವರು. ಅಮ್ಮನ ಪೂಜೆಗೆ ತಂಬಿಟ್ಟು, ಬೇವಿನಸೊಪ್ಪೆ ನೈವೇದ್ಯವಾಗಿದೆ. ಇದರಿಂದ ಸಮಾಧಾನಗೊಂಡ 'ಅಮ್ಮ' ಊರಿನ ಕಡೆ ಸುಳಿಯುವುದಿಲ್ಲ ಎಂಬ ನಂಬಿಕೆ ಈಗಲೂ ಪ್ರಚಲಿತದಲ್ಲಿದೆ.

ಪ್ಲೇಗುಮಾರಿಯಿಂದಲೇ ಜಾಜಗಾರ ಚನ್ನ ಸೇರಿದಂತೆ ನೂರಾರು ಮಂದಿ ಮೈಲಾರದಲ್ಲಿ ತೀರಿಕೊಳ್ಳುತ್ತಾರೆ. ಅವನ ಮಗ ಮೂಡ್ಲಪ್ಪ ಮತ್ತು ಅವನ ಹೆಂಡತಿ ಬರದಲ್ಲಿ ಅಸುನೀಗುತ್ತಾರೆ. ಜಾಜಗಾರ ಚನ್ನನ ಮೊಮ್ಮಗ ಧೂಪದ ಚನ್ನಯ್ಯನ ಹಿರಿಯ ಮಗ ಮೂಡ್ಲಪ್ಪನೂ ವಾಂತಿಭೇದಿ ಜಾಡ್ಯ ತಗುಲಿ ಸಾಯುತ್ತಾನೆ. ಹಿಂದೆ ಇದೇ ಮೂಡ್ಲಪ್ಪನ ತಂದೆ ಚನ್ನಯ್ಯನು ಜಾಡ್ಯ ತಗಲುದಿದ್ದರೂ ತಗುಲಿದೆ ಎಂದು ಹೇಳಿಕೊಂಡು ಮೂರು ದಿನ ಬಸವಣ್ಣನ ಗುಡಿಯಲ್ಲಿ ಕಾಲಕಳೆದಿರುತ್ತಾನೆ.

---

೧. ಕನ್ನಡ ಜನಪದ ವಿಷಯ ವಿಶ್ವಕೋಶ – (ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ೨೦೦೬, ಪ್ರಧಾನ ಸಂಪಾದಕರು, ಅರವಿಂದ ಮಾಲಗತ್ತಿ).

ವಾಂತಿಭೇದಿಯಾಗಿ ಅಸ್ವಸ್ಥರಾದವರಿಗೆ ಎಳನೀರು, ಹುರಿದಕ್ಕಿ ಗಂಜಿ, ಬಿಸಿನೀರು ಕುಡಿಸುವ ಪದ್ಧತಿಯನ್ನು ನೋಡಬಹುದು. ಸೋಂಕುರೋಗವಾದ್ದರಿಂದ ದೂರದಿಂದಲೇ ಆರೈಕೆ ಮಾಡಲಾಗುತ್ತಿತ್ತು.

ಸೋಂಕು ರೋಗಗಳ ಚಿಕಿತ್ಸೆಗಿಂತ ಅದು ಬರದಂತೆ ತಡೆಯಲು ದೇವರ ಮೊರೆಹೋಗುತ್ತಿದ್ದರು. ಇಂಥ ರೋಗಗಳು ಬರಲು ದೇವರನ್ನು ನೆನೆಯದೆ ನೀತಿನಿಯಮ ಬಿಟ್ಟದ್ದೆ ಕಾರಣವೆಂದು ನಂಬಿದ್ದರು. ಇದರ ಭೀಕರತೆಯನ್ನು ಕಂಡು 'ದೊಡ್ಡರೋಗ' ಎಂದು ಕರೆಯುತ್ತಿದ್ದರು. ಈ ಹಿನ್ನೆಲೆಯಿಂದ ಇದನ್ನು ಬೈಗುಳದಲ್ಲಿ ಬಳಸುತ್ತಾರೆ. ಈಗಲೂ ಹಳ್ಳಿಗಾಡಿನಲ್ಲಿ 'ನಿನ್ಗೆ ದೊಡ್ಡ ರೋಗ ಬರ', ನಿನ್ನೆ ವಾಂತಿಭೇದಿ ತಗಲ' ಎಂದು ಬೈಯುವುದನ್ನು ಕಾಣುತ್ತೇವೆ. ಅಂದು 'ಭೀಕರರೋಗ'ಗಳೆಂದು ಗುರುತಿಸಿದ್ದ ಇವುಗಳಿಗೆ ವೈಜ್ಞಾನಿಕ ಪ್ರಗತಿಯಿಂದ ಅನೇಕ ಚುಚ್ಚುಮದ್ದುಗಳು ಸಂಶೋಧನೆಯಾಗಿ ರೋಗಗಳು ಮರೆಯಾಗಿದ್ದರೂ ಅವುಗಳ ಸಂಬಂಧಿಯಾದ ಪೂಜೆ-ನೈವೇದ್ಯಗಳು - ಸಂಪ್ರದಾಯಗಳು ಕಣ್ಮರೆಯಾಗಿಲ್ಲ.

**೮.೧ ಜನಪದರಲ್ಲಿ ಜಾತಿ:**

ಜನಪದರ ಜಾತಿ ಪದ್ಧತಿ ವಿಚಾರದಲ್ಲಿ ಕಟ್ಟುನಿಟ್ಟಿನ ಕ್ರಮಗಳನ್ನು ಕಾಣುತ್ತೇವೆ. ಜಾತಿವಿಚಾರದಲ್ಲಿ ಬಿಗಿನಿಯಮಗಳಿದ್ದವು. ಯಾರಾದರೂ ಜಾತಿಬಿಟ್ಟು ಅನ್ಯ(ಕೆಳಗಿನ) ಜಾತಿಯವರ ಮನೆಯಲ್ಲಿ ಉಂಡರೆ ಅವನನ್ನು ಶುದ್ಧೀಕರಿಸಿ ತಮ್ಮ ಜಾತಿಗೆ ಸೇರಿಸಿಕೊಳ್ಳುವ ಪರಿಪಾಠವಿತ್ತು. ಜಾತಿಕೆಟ್ಟವನಿಗೆ 'ಸೀಗೆಕಾಯಿ ಅರಿಶಿನ ಹಾಕಿ ನಾಲಗೆ ತೊಳೆಸಿ, ಪಂಚಲೋಹದ ತಂತಿಯಲ್ಲಿ ನಾಲಿಗೆಯನ್ನು ಸುಟ್ಟು ಗಂಜಲ ಮುಕ್ಕಳಿಸಿ ಒಳಕ್ಕೆ ಬಿಟ್ಟುಕೊಳ್ಳುತ್ತಿದ್ದರು.[೧]

**೮.೨. ಜನಪದ ವಾದ್ಯವಾಗಿ ತಮಟೆ, ನಗಾರಿ:**

ತಮಟೆ ಅಪೂರ್ವವಾದ ವಾದ್ಯ. ಹಳ್ಳಿಯಲ್ಲಿ ತಮಟೆಯಿಲ್ಲದೆ ಯಾವುದೇ ಸಂಘಟಿತ ಕಾರ್ಯ ನಡೆಯುವಂತಿಲ್ಲ. ಸಾರುವಿಕೆಯಿಂದ ಹಿಡಿದು ಹಬ್ಬ ಹರಿದಿನಗಳನ್ನು ಸೇರಿಕೊಂಡಂತೆ ಸಾವಿನ ನಂತರದ ಅಂತಿಮಯಾತ್ರೆಯವರೆಗೆ ಇದರ ಪಾತ್ರವಿದೆ. ಇದೊಂದು ಕಡಿಮೆ ಖರ್ಚಿನ ವಾದ್ಯ. ಹದಮಾಡಿದ ಎಮ್ಮೆ ಚರ್ಮದಿಂದ ತಯಾರಾದುದು. ಇದನ್ನು ಬಾರಿಸುವ ಮುನ್ನ ನೆಲ್ಲುಲ್ಲಿನ ಬೆಂಕಿಯಿಂದ ಲಯಬದ್ಧವಾದ ಶಬ್ದಬರುವವರೆಗೂ ಕಾಯಿಸಿ ಬಿದುರು ಕಡ್ಡಿಯಿಂದ ಮೆಲ್ಲಗೆ ಬಡಿದು ಬಡಿದು ನೋಡುತ್ತಾರೆ. ಹೆಗಲಿಗೇರಿಸಿ, ಬಿದುರು ಕಡ್ಡಿಗಳಿಂದ ಬಡಿಯುತ್ತಾ ಬಡಿಯುತ್ತಾ ಚೆಗ್ಗಿಣಕ! ಚೆಗ್ಗಿಣಕ! ಎಂದು ಹೆಜ್ಜೆ ಹಾಕುವ ಇವರ ಕೈ ಚಳಕ ಮತ್ತು ಕುಣಿತಕ್ಕೆ ಯಾರಾದರೂ ಮಾರುಹೋಗಲೇಬೇಕು.

---

೧. ಸೊನ್ನೆಯಿಂದ ಸೊನ್ನೆಗೆ, ಪು. ೮೧

**೮.೩. ಬೀಸುವ ಪದ:**

ಶ್ರಮದ ಕೆಲಸದಲ್ಲಿ ತೊಡಗುವಾಗ ಹಾಡುಗಳು ಸಹಜವಾಗಿ ಮೂಡಿಬಂದಿವೆ. ಜನಪದರ ದೈನಂದಿನ ಬದುಕು ಪ್ರಾರಂಭವಾಗುವುದೇ ಬೀಸುವ ಕಾಯಕದಿಂದ. ಬೀಸುವ ಕಲ್ಲು ನಡೆಯುತ್ತಿದ್ದರೆ ಮನೆಯೆಲ್ಲ ಸೌಖ್ಯ ಎಂದರ್ಥ. ನಾಗೇಗೌಡರ ಮತ್ತೊಂದು ಕೃತಿಯಾದ ದೊಡ್ಡಮನೆಯಲ್ಲಿ ಕಾಣುವಷ್ಟು ಬೀಸುವ ಪದಗಳು ಈ ಕೃತಿಯಲ್ಲಿ ದೊರೆಯುವುದಿಲ್ಲವಾದರೂ ಎಲ್ಲೋ ಒಂದೆರಡು ಕಡೆ ಅದರ ಉಲ್ಲೇಖ ಮಾಡಿದ್ದಾರೆ. "ಕೆಳಗಲಮನೆ ಕೆಂಪಿ ರಾಗಿ ಬೀಸುವಾಗ

ಒಂದುರಿಗ್ಹೆಣ್ಣ ಎಂದಿಗೂ ಕೊಡಬಾರದು
ಸಂದೆಯ ಸೊಪ್ಪು ಮಡುವಿನ ನೀರ
ತಂದಲ್ಲದವರತ್ತೆ ಕಳುವ್ಯಾಳು – ಎಂದು ಹಾಡುತ್ತಾಳೆ.

ಎಷ್ಟೇ ಧನಿಕರಾದರೂ ರಾಗಿ ಬೀಸುವುದು ಗ್ರಾಮೀಣರಿಗೆ ಅನಿವಾರ್ಯ ಕಾಯಕವಾಗಿತ್ತು. ಅದರ ಅವಶ್ಯಕತೆಯೂ ಇಲ್ಲದಿಲ್ಲ. ನವರತ್ನರಾಶಿ ಮನೆಯಲ್ಲಿದ್ದರೂ ಚೌಡಿ ಎಂದಿನಂತೆ 'ರಾಮ ರಾಜ್ಯ ಆಳಿದರೂ ರಾಗಿ ಬೀಸುವುದು ತಪ್ಪುವುದಿಲ್ಲ' ಎನ್ನುತ್ತಾ ರಾಗಿಬೀಸಲಾರಂಭಿಸಿದಳು. ಬೀಸುವಾಗ

ಶಂಕು ನುಡಿದಾವೆ ಶನಿವಾರದಯ್ಯಗೆ।
ಎಣ್ಣೆ ಮಜ್ಜಣದ ಒಡೆಯಗೆ – ತಿಮ್ಮಪ್ಪಗೆ।
ಶಂಕು ನುಡಿದಾವೆ ಶನಿವಾರ॥

ಗಂಧಾವ ಬೇಡಿ ನಾನಿನ್ನ ಮಗಳಾದೆ
ಗಂಧಾದ ಕೆಳಗಲ ಚೊಳಚೆ – ತೀರತ ಬೇಡಿ
ಚಂದಾಕೆ ನಾ ತಿಮ್ಮಯ್ನ ಮಗಳಾದೆ

ಎಂದು ಚನ್ನಯ್ಯನ ಅಪ್ಪ ಮೂಡ್ಲಪ್ಪ ತಿಮ್ಮಪ್ಪನ ಒಕ್ಕಲಾಗಿದ್ದರೂ ಈಶ್ವರನ ಒಕ್ಕಲುಗಳೇ ಇರುವ ಮೈಲಾರದಲ್ಲಿ ನೆಲೆಸಿ ಶನಿವಾರ ಮಾಡುವುದನ್ನು ಬಿಟ್ಟೇಬಿಟ್ಟಿದ್ದ. ಅಂದು ಚೌಡಮ್ಮ ಅದನ್ನು ಹಾಡಿನ ಮೂಲಕ ನೆನೆಸಿಕೊಂಡು ಹಾಡಿದುದು ಹೀಗೆ.

**೮.೪. ಜನಪದರಲ್ಲಿ ದೀಪ ಸಂಸ್ಕೃತಿ:**

ಹಳ್ಳಿಯಲ್ಲಿ ಊರಿಗೊಂದು, ಕೇರಿಗೊಂದು ದೇವರುಗಳಿರುತ್ತವೆ. ದೇವರನ್ನು ಪೂಜಿಸದ ಮನೆಗಳಿರಬಹುದು. ಆದರೆ ದೀಪವನ್ನು ಪೂಜಿಸದ ಮನೆಗಳನ್ನು ಕಾಣುವುದು ಸಾಧ್ಯವಿಲ್ಲ. ಜ್ಯೋತಿ ಅಥವಾ ದೀಪ ಎಂಬುದು ಅವರ ಬದುಕಿಗೆ ಮಾರ್ಗದರ್ಶನದ

ಸಂಕೇತವಾಗಿದೆ. ಹಳ್ಳಿಗಳಲ್ಲಿ ಇಂದೂ ಎದ್ದು ಸೂರ್ಯನಿಗೆ, ಭೂಮಿತಾಯಿಗೆ ನಮಸ್ಕರಿಸಿ ದಿನದ ಕೆಲಸವನ್ನು ಆರಂಭಮಾಡುವುದನ್ನು ಕಾಣಬಹುದು.

ಜನಪದರಲ್ಲಿ ಸಂಜೆ ಹೊತ್ತು ದೀಪ ಬೆಳಗಿಸುವ ಅಭ್ಯಾಸವಿದೆ. ಹಲಕಿಗೆ[೧] ತೊಪ್ಪೆ ಕಲೆಸಿ ಹಾಕಿ ಕೈಯೆಣ್ಣೆ ಸೊಡರನ್ನು ಹೊತ್ತಿಸಿ ಕುಂಕುಮ ಹಚ್ಚಿ ಕೈಮುಗಿದರೆ ಅವರ ಪೂಜೆ ಮುಗಿದಂತೆ. ಗೌಡಿತಿ ಚೌಡಿಗೆ ಹೇಳುವ ಗರತಿಯ ಧರ್ಮದಲ್ಲಿ ಮುಸ್ಸಂಜೆ ಹೊತ್ತು ಸೊಡಲಿಗೆ ಎಳೆಗರು ಸಗಣಿ ಕಲಸಿ, ದೇವರನ್ನು ನೆನೆಯುವಂತೆ ಉಪದೇಶಿಸುವುದನ್ನು ಮರೆಯುವುದಿಲ್ಲ. ಹಿಂದಿನ ಕಾಲದಲ್ಲಿ ದೇವರಿಗೆ ಗಂಧದಕಡ್ಡಿಗಿಂತ ಧೂಪ, ಸಾಂಬ್ರಾಣಿ, ಹಾಲುಮಡ್ಡಿಯನ್ನೇ ಹೆಚ್ಚಾಗಿ ಬಳಸುತ್ತಿದ್ದರು. ಪೂಜೆಯಲ್ಲಿ ಬಾಹ್ಯಾಡಂಬರಕ್ಕೆ ಮನಸೋಲದ ಇವರು, ಕಾಯಕದಲ್ಲೇ ಹೆಚ್ಚು ಸಮಯ ಕಳೆಯುವ ಜೀವನವಿಧಾನವನ್ನು ಅಳವಡಿಸಿಕೊಂಡಿದ್ದರು.

--

೧. ಮರದಿಂದ ಮಾಡಿ ಗೋಡೆಗೆ ತಗುಲಿಸಿದ ದೀಪ ಇಡುವ ಸ್ಥಳ. ಅಂಕು ಅಥವಾ ಹಲಕಿನ ಚಿತ್ರವನ್ನು ನಿಬಂಧದ ಕಡೆಯಲ್ಲಿ ನೀಡಿರುವ ಚಿತ್ರದಲ್ಲಿ ಕಾಣಬಹುದು.

# ಉಪಸಂಹಾರ

'ಸೊನ್ನೆಯಿಂದ ಸೊನ್ನೆಗೆ' ಎಚ್.ಎಲ್.ನಾಗೇಗೌಡರ ಎರಡನೆಯ ಕಾದಂಬರಿ. ಇದು ಒಂದು ಕಾಲಮಿತಿಯಲ್ಲಿ ಬಯಲುಸೀಮೆಯ ಬದುಕಿನ ಸಮಗ್ರತೆಯನ್ನು ಕಲಾತ್ಮಕವಾಗಿ ಚಿತ್ರಿಸುವ ಕೃತಿ. ಪ್ರಸ್ತುತ ಕಾದಂಬರಿಯಲ್ಲಿ ಕಂಡುಬರುವ ಜಾನಪದೀಯ ಅಂಶಗಳನ್ನು ವಿಶ್ಲೇಷಿಸಲಾಗಿದೆ. ಇದರಲ್ಲಿ ಗ್ರಾಮೀಣರ ಜೀವನ ವಿಧಾನ– ಅವರ ಆಹಾರ, ಉಡುಗೆ–ತೊಡುಗೆ, ಕೃಷಿಪದ್ಧತಿ, ನಂಬಿಕೆ, ಸಂಪ್ರದಾಯ ಮೊದಲಾದ ಅಂಶಗಳತ್ತ ಗಮನಹರಿಸಲಾಗಿದೆ. ಜನಪದರ ಭಾಷಾ ವೈವಿಧ್ಯ ಗಾದೆಗಳು, ಬೈಗುಳ, ಪಡೆನುಡಿಗಳ ವಿಶ್ಲೇಷಣೆ ಮಾಡಲಾಗಿದೆ. ಗ್ರಾಮ್ಯರ ನ್ಯಾಯಪದ್ಧತಿ, ವ್ಯಾಪಾರ–ವ್ಯವಹಾರ, ರೈತಮಕ್ಕಳ ಹರಕೆ ಹಬ್ಬಗಳು ಮೊದಲಾದ ರೀತಿನೀತಿಗಳನ್ನು ಮುಂದಿಡಲಾಗಿದೆ.

'ಸೊನ್ನೆಯಿಂದ ಸೊನ್ನೆಗೆ' ಕೃತಿ ಹಲವಾರು ಸಂಗತಿಗಳಿಂದ ಉತ್ಕೃಷ್ಟವಾಗಿದೆ. ಇದೊಂದು ಉತ್ತಮ ಪ್ರಾದೇಶಿಕ ಕಾದಂಬರಿಯಾಗಿದೆ. ಕಾದಂಬರಿ ಪ್ರಕಾರವನ್ನು ಕರತಲ ರಂಗಭೂಮಿ ಎಂದೇ ಕರೆಯಲಾಗಿದೆ. ಕಾದಂಬರಿಗಳಲ್ಲಿ ಐತಿಹಾಸಿಕ ಕಾದಂಬರಿ, ಪತ್ತೇದಾರಿ ಕಾದಂಬರಿ, ಸಾಮಾಜಿಕ ಕಾದಂಬರಿ, ಮನೋವಿಶ್ಲೇಷಣಾತ್ಮಕ ಕಾದಂಬರಿ ಮೊದಲಾದ ಬಗೆಗಳನ್ನು ಕಾಣುತ್ತೇವೆ.

ಪ್ರಾದೇಶಿಕ ಕಾದಂಬರಿಗಳು ಒಂದು ಪ್ರದೇಶದ ಜೀವನವಿಧಾನ, ಭಾಷೆ, ಸಂಸ್ಕೃತಿ ಮೊದಲಾದ ಜೀವನಚಿತ್ರಣವನ್ನು ನೀಡುತ್ತವೆ. ಆಧುನಿಕ ಕನ್ನಡಸಾಹಿತ್ಯದಲ್ಲಿ, ಕಾದಂಬರಿ ಪ್ರಕಾರವನ್ನು ಗಮನಿಸಿದಾಗ ಪ್ರಾದೇಶಿಕ ಕಾದಂಬರಿಗಳಿಗೆ ವಿಶೇಷವಾದ ಸ್ಥಾನವಿದೆ. ನವೋದಯ ಲೇಖಕರಲ್ಲಿ ಪ್ರಾದೇಶಿಕ ಚಿತ್ರಣದ ಬಗೆಗೆ ವಿಶೇಷ ಒಲವಿರುವುದನ್ನು ಕಾಣುತ್ತೇವೆ. ಅದರಲ್ಲೂ ಗ್ರಾಮೀಣ ಬಾಳಿನ ಚಿತ್ರಣಗಳು ನವೋದಯ ಸಾಹಿತ್ಯದ ಒಂದು ಅಂಶವಾಗಿ ಬಂದಿರುವನ್ನು ಗಮನಿಸಬಹುದು. ಉದಾಹರಣೆಗೆ ಕುವೆಂಪು ಅವರ 'ಕಾನೂರು ಹೆಗ್ಗಡಿತಿ', 'ಮಲೆಗಳಲ್ಲಿ ಮದುಮಗಳು', ರಾವ್‌ಬಹುದ್ದೂರರ 'ಗ್ರಾಮಾಯಣ', ಎಚ್.ಎಲ್.ನಾಗೇಗೌಡರ 'ದೊಡ್ಡಮನೆ' ಮೊದಲಾದ ಕೃತಿಗಳನ್ನು ಹೆಸರಿಸಬಹುದಾಗಿದೆ. 'ಸೊನ್ನೆಯಿಂದ ಸೊನ್ನೆಗೆ' – ಇವುಗಳ ಸಾಲಿಗೆ ಸೇರಬಹುದಾದ ಮತ್ತೊಂದು ಪ್ರಾದೇಶಿಕ ಕಾದಂಬರಿ.

'ಸೊನ್ನೆಯಿಂದ ಸೊನ್ನೆಗೆ' – ಈ ಕೃತಿ ಪ್ರಾದೇಶಿಕ ಕಾದಂಬರಿಯಾಗಿದ್ದು, ಹಲವಾರು ಉತ್ತಮಾಂಶಗಳನ್ನು ತನ್ನ ಒಡಲಲ್ಲಿ ಹುದುಗಿಸಿಕೊಂಡಿದೆ. ಬಯಲುಸೀಮೆಯ (ಮಂಡ್ಯಜಿಲ್ಲೆಯ ಸುತ್ತಮುತ್ತಲ) ಜೀವನವಿಧಾನ, ಕೃಷಿ ಮೊದಲಾದ ಸಂಸ್ಕೃತಿಯ ಇತಿಹಾಸವನ್ನು ತೆರೆದಿಡುತ್ತದೆ.

ಐತಿಹಾಸಿಕ ವಿಚಾರಗಳಲ್ಲಿ ಮೈಸೂರಿನ ಇತಿಹಾಸದ ಅನೇಕ ಸಂಗತಿಗಳು ಸೇರಿವೆ. ೧೮೯೭ರಲ್ಲಿ ಮೈಸೂರು ರಾಜರ ಮೊದಲ ಅರಮನೆ ಬೆಂಕಿಗೆ ಆಹುತಿಯಾಗಿ ೧೯೧೨ರಲ್ಲಿ ಹೊಸ ಅರಮನೆ ಪೂರ್ಣಗೊಂಡ ವಿಚಾರವನ್ನು ಈ ಕೃತಿಯಲ್ಲಿ ಕಾಣಬಹುದು. ಮುಮ್ಮಡಿ

ಕೃಷ್ಣರಾಜ ಒಡೆಯರ ಮತ್ತು ಅವರ ಕಾಲದ ದಿವಾನರಾದ ಪೂರ್ಣಯ್ಯನವರ ವಿಚಾರ, ನಂತರ ಇಂಗ್ಲಿಷ್‌ನವರು ರಾಜ್ಯ ಆಡಳಿತ ನಡೆಸಿದ್ದು, ಕೃಷ್ಣರಾಜ ಒಡೆಯರ ಮರಣಾನಂತರ ಚಾಮರಾಜ ಒಡೆಯರು ಪಟ್ಟವೇರಿದ ಪ್ರಸಂಗ, ಅಲಮೇಲಮ್ಮನ ಶಾಪದ ಸಂಗತಿಗಳು ಕೃತಿಯಲ್ಲಿ ಬಂದಿವೆ.

೧೯೧೨ರಲ್ಲಿ ಹೊಸ ಅರಮನೆ ಪೂರ್ಣಗೊಂಡಾಗ ಅದನ್ನು ನೋಡಲು ಮತ್ತು ಕಾರ್ಯನಿಮಿತ್ತವಾಗಿ ಕಥಾನಾಯಕ ಧೂಪದ ಚನ್ನೇಗೌಡರು ಮೈಸೂರಿಗೆ ಹೋಗುತ್ತಾರೆ. ಇದನ್ನು ಆಧರಿಸಿ ಕಥೆಯ ಕಾಲವನ್ನು ನೂರು–ನೂರೈವತ್ತು ವರ್ಷ ಹಿಂದಕ್ಕೆ ಓಡಿಸಬಹುದು. ಅಂದರೆ ೧೯ನೇ ಶತಮಾನದ ಅಂತ್ಯ ಹಾಗೂ ೨೦ನೇ ಶತಮಾನದ ಆರಂಭ ಜೀವನವಿಧಾನದ ಚಿತ್ರಣ ಕೃತಿಯಲ್ಲಿ ರೂಪುಗೊಂಡಿದೆ.

ಪ್ರಾದೇಶಿಕ ಕಾದಂಬರಿಯಾಗಿ ಈ ಕೃತಿಯ ಮಹತ್ವ ಹಿರಿದಾದುದು. ಎಷ್ಟು ಹಣಕೊಟ್ಟರೂ ದುರ್ಲಭವಾಗಿರುವ ಗ್ರಾಮ್ಯರ ಜೀವನ ಈ ಕೃತಿಯಲ್ಲಿ ಹಾಸುಹೊಕ್ಕಾಗಿದೆ. ಅಂದಿನ ಜನರ ನಡವಳಿಕೆಯಲ್ಲಿ ಸಂಸ್ಕೃತಿ ತುಂಬಿತ್ತು. ಶಿವಾಚಾರದವರೇ ಮೊದಲಾದ ದಾರಿಹೋಕರಿಗೆ ಉಣಲು–ತಂಗಲು ಅಣಿಮಾಡುವುದು ಸಾಮಾನ್ಯ ಸಂಗತಿಯಾಗಿತ್ತು. 'ಅಡುವವಂಗಕ್ಕಿಯನು ಕೊಡುವುದು ಬಿಡಾರವನು ಕುಡಿಯುವರೆ ನೀರನೆರೆಯುವುದು – ಇವು ಮೂರು ಬಡವರ ದಾನ' ಎಂಬ ಸರ್ವಜ್ಞನ ಮಾತು ಅವರ ಬಾಳಿನಲ್ಲಿ ಬೆರೆತುಹೋಗಿತ್ತು[೧] ಇತರರಿಗೆ ಸಹಾಯ ಮಾಡಲು ಹಿಂದುಮುಂದು ಯೋಚಿಸುವ ಇಂದಿನ ನಾಗರಿಕ ವರ್ತನೆಗೂ ಬಂಗ ಬಡತನಕ್ಕೆ ಓಡಿಬರುವ ಪರೋಪಕಾರಿ ಮಲ್ಲೇಗೌಡರಂಥ ವ್ಯಕ್ತಿಗಳ ನಡವಳಿಕೆಗೂ ಅಜಗಜಾಂತರವುಂಟು. ಇಂತಹ ನೈತಿಕ ಮೌಲ್ಯಗಳ ಉಗ್ರಾಣದಂತಿದೆ ಈ ಕೃತಿ. 'ಅಳ್ಳಿತಾಳು, ಒಳ್ಳೆಮುದ್ದೆ ಶಿಷ್ಯರ ಕಿವಿಗೆರಡು ಒಳ್ಳೇಮಾತು' – ಇವಿಷ್ಟನ್ನೆ ಬಯಸುವ ಎಷ್ಟೊ ಮನಸ್ಸುಗಳು ಈ ಕೃತಿಯಲ್ಲಿ ಮೈದಾಳಿ ನಿಂತಿವೆ.

ಕುಲವಾಡಿ ಹುಚ್ಚೀರ, ಕುಂಡಪ್ಪ, ಸರ್ವಜ್ಞ ಸಂಗಣ್ಣಾ ಮೊದಲಾದ ಪಾತ್ರಗಳು ಸಹೃದಯರ ಮನದಲ್ಲಿ ನೆಲೆಯೂರಿ ಗ್ರಾಮ್ಯತೆಯ ಪರಿಪೂರ್ಣತೆಗೆ ಪೂರಕವಾಗಿವೆ. ಕಿವಿಗೆ ಚಂದ್ರಮುರಾವು, ತೋಳಿಗೆ ತೋಳುಬಂದಿ, ಕೈಯಲ್ಲಿ ದೊಣ್ಣೆ, ಹೆಗಲಮೇಲಿನ ಹಚ್ಚಡ, ತಿರುವಿದ ಮೀಸೆಯ ಹುಚ್ಚೀರನನ್ನು ಓದುಗ ಮನಸ್ಸು ಮರೆಯುವುದು ಸಾಧ್ಯವೆ?

ಕಣ್ಣಿದ್ದವರೂ ನೋಡಿ ನಾಚುವಂತೆ ಬಾಳಿದ, 'ಕರ್ಪೂರ ಉರದೋದಂಗೆ ಉರದೋದ್ರೆ ಅದೊಂದು ಲಕ್ಷಣ' ಎಂದು ಸಾವಿನ ಬಗೆಗೆ ತಾತ್ವಿಕ ಚಿಂತನೆ ನಡೆಸಿ, ಕಣ್ಣಿಲ್ಲದಿದ್ದರೂ ಕೈಲಾದ ಮಾತೃಸೇವೆ ಮಾಡಿ 'ಇಚ್ಛಾಮರಣಿ'ಯಾದ, ಚಕಮಕಿ ಕಲ್ಲನ್ನು ದೀಪದೊಂದಿಗೆ ಇಡುತ್ತಾ, ಕೈಯಲ್ಲೆ ಸವರಿ ತ್ರಾಸು ಸರಿಮಾಡುವ, ಮಂತಿನ ಹುರಿ ಹೊಸೆಯುವ ಕುಂಡಪ್ಪನು ಸಾಕೆಂದರೂ ಕಣ್ಮುಂದೆ ನಿಲ್ಲುತ್ತಾನೆ. ಕಲ್ಲೇಗೌಡರು, ಅವರ ಮಗ ಮಲ್ಲೇಗೌಡ, ಪಟೇಲ ದೊಡ್ಡಲಿಂಗೇಗೌಡ,

---

೧. ಸೊನ್ನೆಯಿಂದ ಸೊನ್ನೆಗೆ, ಪು. ೫

ಅವನ ಮಗ ಕುಳ್ಳೇಗೌಡ, ಲಿಂಗಾಯಿತರಾದ ಗುರುಸಿದ್ಧಯ್ಯ, ಅವರ ಮಗ ಗುರುಮಲ್ಲಯ್ಯ, ಅವನ ಮುಂದಿನ ತಲೆಮಾರಾದ ಗುರುನಂಜಯ್ಯ ಹೀಗೆ ಹಲವಾರು ಸಾತ್ವಿಕ- ಅಸಾತ್ವಿಕ ಪಾತ್ರಗಳು ಕಾದಂಬರಿಯೊಂದಿಗೆ ಓತಪ್ರೋತವಾಗಿ ಬೆಸೆದುಕೊಂಡು ಕೃತಿಯು ಗಟ್ಟಿತನವನ್ನು ಕಾಯ್ದುಕೊಳ್ಳಲು ನೆರವಾಗಿದೆ.

ಪ್ರಾದೇಶಿಕತೆಯ ವಿಚಾರವೆಂದ ಕೂಡಲೆ ನೆನಪಾಗುವುದು ಆಹಾರಪದ್ಧತಿ. ಬಯಲು ಸೀಮೆಗೆ ಸೀಮಿತವಾದ, ಇತರ ಪ್ರದೇಶಗಳಲ್ಲಿ ಕಾಣದ ಉಪ್ಸಾರು, ಮುದ್ದೆ, ಸೀಗಡಿ ಹಾಕಿ ಕಲ್ಲೊಗ್ಗರಣೆ ಮಾಡಿದ ಮಸೊಪ್ಪು ಮೊದಲಾದ ಶಾಕಾಹಾರದ ಜೊತೆಗೆ ಮಂಡ್ಯದ ಸುತ್ತಮುತ್ತಲ ಜನರ ಮತ್ತೊಂದು 'ವಿಶೇಷ' ಅಡುಗೆ 'ಬಾಡಿನೂಟ' ನೆನಪಾಗುತ್ತದೆ. ಆಹಾರ ಪದ್ಧತಿ ಆಯಾಯಪ್ರದೇಶದ ಭೌಗೋಳಿಕ, ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳನ್ನು ಅವಲಂಬಿಸಿರುತ್ತದೆ ಎಂಬುದಕ್ಕೆ ಇವು ಸ್ಪಷ್ಟ ಉದಾಹರಣೆಗಳಾಗುತ್ತವೆ. ಆಹಾರ ಪದ್ಧತಿಯ ವಿಚಾರದಲ್ಲಿ ಅಂದು ಬೆಂಗಾಡಾಗಿದ್ದ ಬಯಲುಸೀಮೆ ಮಂಡ್ಯಕ್ಕೂ ಇಂದಿನ ನೀರಾವರಿಯಿಂದ ಕೂಡಿದ ಮಂಡ್ಯಕ್ಕೂ ಯಾವುದೇ ವ್ಯತ್ಯಾಸ ಕಾಣಸಿಗದು. ಗೋಡೆಗೆ ಹೊಡೆದರೆ ಹಿಂದಕ್ಕೆ ಪುಟಹಾರಿ ವಾಪಸು ಬರುವಂತಹ ಹಿಟ್ಟನ್ನು(ಮುದ್ದೆಯನ್ನು) ಒಂದು ಇಲ್ಲವೇ ಎರಡು ಮುದ್ದೆ ಉಣ್ಣುತ್ತಿದ್ದರು. ಒಕ್ಕಲಿಗರೇ ಅಧಿಕವಾಗಿದ್ದು ಹೊಲದಲ್ಲಿ ದುಡಿಯಬೇಕಾದ ಮೈಗೆ ಶಕ್ತಿ ಸಿಗುತ್ತಿದ್ದುದು ಇಂತಹ ಆಹಾರದಿಂದಲೇ - ಹೀಗೆ ಪ್ರಾದೇಶಿಕ ಆಹಾರ ಪದ್ಧತಿಯ ಉಲ್ಲೇಖ ಕೃತಿಯಲ್ಲಿ ಸಮಯೋಚಿತವಾಗಿ ಬಂದು ಕೃತಿಯ ಸಾರವನ್ನು ಹೆಚ್ಚಿಸಿದೆ.

ಬಯಲು ಸೀಮೆಯ ಜನರ ಪ್ರಮುಖ ವೃತ್ತಿ ಕೃಷಿ. ಇಲ್ಲಿನ ರೈತನ ಬದುಕು, ಅವನ ವೃತ್ತಿಗೆ ಸಂಬಂಧಿಸಿದ ಸಾಧನ ಸಲಕರಣೆಗಳ ಸಂಗತಿಗಳು ಕೃತಿಯಲ್ಲಿ ವಿಶೇಷವಾಗಿ ಮೈದಾಳಿವೆ. 'ರೈತರ ಬಾಳಿನ ಗೀತೋಪದೇಶ' ಎಂಬ ಭಾಗದಲ್ಲಿ ಕೃಷಿ ಸಂಬಂಧಿತ ವಿವರಗಳು ದಟ್ಟವಾಗಿ ಬಂದಿವೆ. ಈ ಭಾಗ 'ಕೃಷಿಕರ ಕೈಪಿಡಿ'ಯಂತೆ ಇದೆ. ಚನ್ನ-ಚೌಡಿಯರನ್ನು ಅವರ ಮನೆಗೆ ಕಳುಹಿಸಿಕೊಡುವ ಸಾಂಪ್ರದಾಯಿಕ ಸನ್ನಿವೇಶದಲ್ಲಿ ಬಂದ ಈ ಭಾಗವು ಕೃತಿಗೆ ಪೂರಕವಾಗಿ ನಿಂತಿದೆ. 'ಎತ್ತು ಎರಡಿದ್ದರೆ ಎರಡು ಮೂಗುದಾರ ಅಟ್ಟದ ಮ್ಯಾಲಿರಬೇಕು... ಎಂಬ ಸಂಗತಿಯಿಂದ ಹಿಡಿದು... ಎತ್ತಿಗೆ ಅಜೀರ್ಣವಾದರೆ ಈರುಳ್ಳಿ ಮೆಣಸು, ಬೆಳ್ಳುಳ್ಳಿ ಅರಿಶಿನ ಕೊತ್ತಂಬರಿ - ಹಾಕಿ ಮುದ್ದೆ ಮಾಡಿ ನುಂಗಿಸಬೇಕೆಂಬ ಎಂಬ ಮನೆಮದ್ದಿನವರೆಗೆ ವಿಸ್ತರಿಸಿ... ಹೊಲ ಉಳುವುದು, ಬಿತ್ತುವುದು... ಕೆಚ್ಚಲಿಗೆ ನೀರಾಕ್ದೆ ಹಾಲು ಕರೀಬಾರದು, ಸತ್ತೋದ ಕರೀನ ಹಸೀನ್ಹಾಲು ಹಿಂಡಬಾರದು ಎಂಬ ಮಾನವೀಯ ಸಂಸ್ಕೃತಿಯನ್ನು ಸಾರುವವರೆಗೂ ಗೀತೋಪದೇಶ ಸಾಗುತ್ತದೆ.

ಇತ್ತ ತಿಮ್ಮಾಜಮ್ಮ ಚೌಡಿಗೆ 'ಸೀರಣಿಗೆ' ತೆಗೆದುಕೊಂಡು ಹೇನು ಬಗಿಯುವ ನೆಪದಲ್ಲಿ ಗರತಿಯಾದವಳ ಮನೆವಾರ್ತೆ ಹೇಗಿರಬೇಕೆಂಬ ಕಿವಿಮಾತು ಹೇಳುತ್ತಾಳೆ. ಮನೆಯೊಳಗಿನ ಒಪ್ಪ-ಓರಣದ ಜೊತೆಗೆ ಹೊರಗೂ ದುಡಿಯಬೇಕೆಂಬುದನ್ನು ಹೇಳಲು ಮರೆಯುವುದಿಲ್ಲ.

ಹೊಲದಲ್ಲಿ 'ಗಂಡ್ಸಾಗಬೇಕು ಮನೇಲಿ ಹೆಂಗ್ಸಾಗಬೇಕು' ಎನ್ನುವುದರ ಮೂಲಕ ಅಂದಿನ ಗ್ರಾಮೀಣ ಮಹಿಳೆಯ ದುಡಿಮೆಯ ಅನಿವಾರ್ಯತೆ ಎಷ್ಟು ಎಂಬುದನ್ನು ಮನಗಾಣಬಹುದು. ಹೀಗೆ 'ರೈತಾಪಿ ಸಂಸಾರದ ಗೀತೋಪದೇಶ'ದಲ್ಲಿ ಹತ್ತು ಗುಳ, ಒಂದುಜೊತೆ ಎತ್ತು ಮತ್ತು ಸಂಸಾರಕ್ಕೆ ಬೇಕಾದ ಎಡಗುಡಾಣ, ಮೊಗೆ, ಧೂಮುಂಡಿಗೆ, ಕರೆಗಡಿಗೆ, ಬೇಸಾಯಕ್ಕೆ ಬೇಕಾದ ಎಡಗೊಡಲಿ, ಕುಯ್ಗತ್ತಿ, ಚಿಕ್ಕಗೊಡಲಿ ಮೊದಲಾದ ಸಲಕರಣೆಗಳನ್ನು ಕಳುಹಿಸಿ ಕೊಡುವುದರ ಮೂಲಕ ಕೃಷಿಬದುಕಿಗೆ ನಾಂದಿಹಾಡಲಾಗಿದೆ.

ಕೃಷಿ ಸಲಕರಣೆಗಳಾದ ಗುಳ, (ದಬ್ಬೆಗುಳದ ಹುಟ್ಟ ಇತಿಹಾಸ ಸ್ವಾರಸ್ಯಕರವಾಗಿದೆ. ಅದರೊಂದಿಗೆ ಒಂದು ಪದ್ಧತಿಯ ಅನಾವರಣ ಮನಸ್ಸನ್ನು ಸೆಳೆಯುತ್ತದೆ). ಗಾಡಿ/ಚಕ್ಕಡಿ/ಬಂಡಿ ತಯಾರಿಕೆ ಮತ್ತು ಮಾರಾಟಕ್ಕೆ ಸಂಬಂಧಿಸಿದ ವ್ಯಾಪಾರ ಪದ್ಧತಿಗಳು ನಮ್ಮ ಜಾನಪದೀಯ ಜ್ಞಾನವನ್ನು ಹೆಚ್ಚಿಸುತ್ತದೆ.

ಪ್ರಾದೇಶಿಕ ಭಾಷೆ ಕಾದಂಬರಿಯಲ್ಲಿ ಪುಷ್ಠಿಗೊಂಡು ಗಮನಸೆಳೆಯುತ್ತದೆ. ಲೇಖಕರು ಬಳಸಿರುವ ಗಾದೆಗಳು, ನುಡಿಗಟ್ಟುಗಳು, ವಿಶಿಷ್ಟ ಪದಗಳು ಮನಸೆಳೆಯುತ್ತವೆ. ನಲವತ್ತಕ್ಕೂ ಹೆಚ್ಚು ಗಾದೆಗಳು ಸಮಯೋಚಿತವಾಗಿ ಮಿಂಚಿ ಬೆಳಕನ್ನು ಚೆಲ್ಲಿವೆ. 'ಶಿಶುಮಗನೆ' ಎಂದು ಕರೆಯುವ ಗುರುಸಿದ್ದಯ್ಯನವರ ಹೆಂಡತಿಯ ಮೃದುಭಾಷೆ ಹಿಡಿದು ನಿಲ್ಲಿಸುತ್ತದೆ. ದೇವಸ್ಥಾನ ಕಟ್ಟಿಸುವ ವಿಚಾರವಾಗಿ ಊರಿನ ಗೆಂಡೆಬೋರಣ್ಣನು ಸಭೆಯಲ್ಲಿ ನಿಂತು ಮಾತನಾಡುವ ಶೈಲಿ ನಗೆ ತರಿಸುತ್ತದೆ. "ಕಿಬ್ಬನಹಳ್ಳಿ ಭಾಮೈಕಳ ಮನೀಗ್ಹೋದ್ರೆ ಊರೆಲ್ಲ ಕೇಳೋರೆ, ಯಾವಾಗ ನಿಮ್ಮೂರಗುಡಿ ಕಟ್ಟಿಸ್ತೀರಾ? ಅಂತಾ, ನಾನು 'ಬರೋವರ್ಸ' 'ಬರೋವರ್ಸ' ಅಂತ ಹೇಳಿ ಸಾಕಾಗಿಬಿಡ್ತು. 'ಅವರ ಮನೆ ಮಂಡೆ ಮಾಸ್ಹೋಗ' ನನಗೆ 'ಬರೋವರ್ಷ' ಅಂತ ಅಡ್ಡೆಸರಿಟ್ಟು ಬುಟ್ಟವ್ರೆ. ಸರಸರನೆ ಗುಡಿಕಟ್ಟಿ ನಮ್ಮಪ್ಪ ಇಟ್ಟ ಹೆಸರಿನಲ್ಲಿ ಕರೀವಂಗೆ ಮಾಡಿ. ಬೇಕಾದ್ರೆ ಎರಡು ಎತ್ತೋಳಿ ತಗಳ್ಳಿ ನಂತಾವ!" ಎಂದು ಹೇಳಿಸಿ ಗ್ರಾಮ್ಯರ ಮಾತಿನ ಸಹಜ ಶೈಲಿಯನ್ನು ಲೇಖಕರು ಹಿಡಿದಿರಿಸಿದ್ದಾರೆ.

ತಂಟ್ರದಲೆ ಚೌಡಿಯು "ಒಂದಿನಾರಾ ಹಾಕ್ಕೋಬೇಕು ನಾಗರಾ" ಎಂಬ ಆಸೆ ವ್ಯಕ್ತಪಡಿಸಲು ಚನ್ನ ಕೊಟ್ಟ ಹಾಸ್ಯಮಯ ಪ್ರತ್ಯುತ್ತರ 'ಕಿಮ್ಮೂಳಿ ತಲೆಮ್ಯಾಲೆ ದೇವರು ಹೊರಿಸ್ದಂಗಾಯ್ತದೆ'.... ಹುಬ್ಬಲ್ಲು, ಜೊತೆಗೆ ತಂಟ್ರದಲೆ! ಒಂದು ಸೊಲಿಗೆಣ್ಣೆಯ ಆರು ತಿಂಗಳು ನೀವಿದ್ರೂ ತಂಟ್ರದಲೆ ಹೋಗೋದಿಲ್ಲ ಬ್ಯಾಡಾ!" ಎಂದು ಬಿಟ್ಟ. ಇಲ್ಲಿ ಗಂಡಹೆಂಡತಿಯರ ಸರಸದ ಮಾತಿನಲ್ಲಿ ಇಣುಕಿದ ಹಾಸ್ಯವನ್ನು ಸವಿಯಬಹುದಾಗಿದೆ.

ಕಾದಂಬರಿಕಾರರು ಕೊಡುವ ಉಪಮೆಗಳು ಜನಪದ ಲೋಕದಿಂದ ಹೊರಗುಳಿದಿಲ್ಲ. ಚೌಜಗಾರ ಕುಳದ ಚನ್ನ 'ನಮಗೆಲ್ಲಾ ಉಗನಿ ಅಂಬು ಸುತ್ತಿಕೊಂಡಂಗೆ ಸುತ್ತಿಕೊಂಡವ್ನೆ'... ಕಾಮದ ಸೆಳೆತಕ್ಕೆ ಸಿಕ್ಕಿದ ಚನ್ನೇಗೌಡರು 'ಮೋಳೆ ಎದ್ದ ಕೆರೆಯ ಏರಿಯಂತೆ'... ಮನಸೋತು ಬಿಟ್ಟರು... ಏರಿ ಒಡೆದ ಕೆರೆಯ ಅಂಗಳಕ್ಕೆ ಊರ ದನವೆಲ್ಲಾ ನುಗ್ಗುವಂತೆ... ಕಿಮ್ಮೂಳಿ

ತಲೆಮ್ಯಾಲೆ ದೇವರು ಹೊರಿಸ್ದಂಗೆ... ಮೊದಲಾದ ಹೋಲಿಕೆಗಳು ಕೃತಿಯ ಅಂದವನ್ನು ಹೆಚ್ಚಿಸಿವೆ.

'ಸೊನ್ನೆಯಿಂದ ಸೊನ್ನೆಗೆ' ಕಾದಂಬರಿಯಲ್ಲಿ ೧೫ ಭಾಗಗಳಿವೆ. ಪ್ರತಿಯೊಂದು ಅಧ್ಯಾಯವೂ 'ಶೀರ್ಷಿಕೆ'ಯಿಂದ ಕೂಡಿದೆ. ಒಂದೊಂದು ಭಾಗವನ್ನು ಓದುವಾಗ ಸ್ವತಂತ್ರ ಕಥೆ ಎಂಬಂತೆ ಭಾಸವಾಗುತ್ತದೆ.

ಶೈಲಿ ವೈಶಿಷ್ಟ್ಯತೆಯನ್ನು ಗುರುತಿಸುವಾಗ ಸರ್ವಜ್ಞನ ವಚನಗಳನ್ನು ಉಲ್ಲೇಖಿಸಿರುವುದು ಅತ್ಯಂತ ಸೂಕ್ತ ಎನಿಸುತ್ತದೆ. ಗುರುಮಲ್ಲಯ್ಯನವರ ಮೂಲಕ ಹೇಳಿಸಿರುವ ಓದಿಬೂದಿಯನು ಪೂಸಿ... ಇಂದ್ರಿಯವ ಕಾದಾತಯೋಗಿ, ಕಣ್ಣಿನಿಂದಲೇ ಪುಣ್ಯ.... ಲೋಕಕ್ಕೆ ಕಣ್ಣೀ ಕಾರಣವು.... ಬಂದುದನೆ ತಾ ಹಾಸಿ... ನಂದಿಹೋಗುವುದು ಸರ್ವಜ್ಞ ಎಂಬವು ಮುಖ್ಯವಾದವು. ಅಲ್ಲದೇ ಯಾವಾಗಲೂ ಸರ್ವಜ್ಞನ ಪದಗಳು ಬಾಯಲ್ಲಿ ನಲಿಯುತ್ತಿದ್ದುದರಿಂದ ಸಂಗಣ್ಣನಿಗೆ 'ಸರ್ವಜ್ಞ ಸಂಗಣ್ಣ'ನೆಂದೇ ಕರೆಯುತ್ತಿದ್ದು ಅವನ ಮೂಲಕ ಆಡಿಸಿರುವ ತ್ರಿಪದಿಗಳು ಮತ್ತು ಮಲ್ಲೇಗೌಡರು ಚನ್ನನಿಗೆ ಹೇಳುವ ಅನೇಕ ತಾತ್ವಿಕ ಅರ್ಥವನ್ನೊಳಗೊಂಡ ನುಡಿಗಳು ಕಥೆಗೆ ಪೂರಕವಾಗಿದ್ದು, ಕೃತಿಗೆ ಪುಷ್ಠಿಯನ್ನು ನೀಡಿವೆ.

ಜಾನಪದ ನಂಬಿಕೆಗಳು (ಮಂಗಳವಾರ ಹಿಡಿದ ಕೆಲ್ಸ ಬಗೆಹರಿಯಾಕಿಲ್ಲ – ಪು. ೧೬) ಹಬ್ಬಗಳು (ಗ್ರಾಮದೇವತೆಯ ಪೂಜೆ) ಸಂಪ್ರದಾಯಗಳು, ಹರಕೆಗಳು ಮೊದಲಾದ ಜನಪದರ ರೀತಿನೀತಿಗಳು ಕೃತಿಯಲ್ಲಿ ಮೇಳೈಸಿವೆ.

ಜಾನಪದ ಪ್ರಪಂಚ ಬಹುಸಮೃದ್ಧವಾದುದು. ಅಷ್ಟೇ ಅಲ್ಲ ವಿಸ್ತಾರವೂ, ವೈವಿಧ್ಯವೂ ಆಗಿದ್ದು ಶಿಷ್ಟಸಾಹಿತ್ಯ, ಸಂಸ್ಕೃತಿಗೆ 'ಗಂಗೋತ್ರಿ' ಎನಿಸಿದೆ. ಯಂತ್ರಗಳ ಆಗಮನದಿಂದ ಗ್ರಾಮೀಣರ ಜನಜೀವನ ಮಾರ್ಪಾಡಾಗಿದೆ. ಜನಪದರ ಹಬ್ಬ, ಆಚರಣೆಗಳು, ಉತ್ಸವಗಳು, ವೃತ್ತಿಗಳು, ವಿವಿಧ ಸಂದರ್ಭದ ಸಂಭ್ರಮಗಳು ಇಂದು ಕಣ್ಮರೆಯಾಗುತ್ತಿವೆ.

ಕೆಲವೆಡೆ ಕೆಲವೊಂದು ಆಚರಣೆಗಳನ್ನು ಸಾಂಕೇತಿಕವಾಗಿಯೋ ಅಥವಾ ಯಾಂತ್ರಿಕವಾಗಿಯೊ ನಡೆಸುತ್ತಾ ಬಂದಿರುತ್ತಾರೆ. ಇದಕ್ಕೆ ವೈಚಾರಿಕತೆ ಕಾರಣವಾಗಿರಬಹುದು. ಇಂತಹ ಮಾರ್ಪಾಡು ಜೀವನ ವಿಧಾನಕ್ಕಷ್ಟೆ ಸೀಮಿತವಾಗಿಲ್ಲ. ಭಾಷೆಯಲ್ಲೂ ತಲೆದೋರಿದೆ. ಶುದ್ಧ ಗ್ರಾಮ್ಯ ಭಾಷೆಯ ಸೊಗಡನ್ನು ಅರಸಬೇಕಾದ ದಿನ ಬಂದಿದೆ. ಇಂದಿನ ಆಡುಭಾಷೆಯಲ್ಲಿನ 'ಮಿಶ್ರ'ವನ್ನು ಅನಿವಾರ್ಯವೆಂದು ಒಪ್ಪಿದ್ದೇವೆ.

ಗ್ರಾಮವಾಸಿಗಳಿಗೇ ವಿಶಿಷ್ಟ ಎನಿಸಿರುವ ಕೆಲವೊಂದು ನುಡಿಗಟ್ಟುಗಳು, ಪದಗಳು, ಅವರಿಂದಲೇ ದೂರವಾಗಿವೆ. ಕೃಷಿ, ಕಮ್ಮಾರಿಕೆ ಮೊದಲಾದ ವೃತ್ತಿಗಳಂತೂ ನಾಗರಿಕತೆ, ಆಧುನಿಕತೆಗೆ ಸಿಕ್ಕಿ ತತ್ತರಿಸಿಹೋಗಿವೆ. ಜನಪದರಿಗೆ ಸಂಬಂಧಪಟ್ಟ ಪದಗಳು ಶಬ್ದಕೋಶ ಸೇರಿದ್ದರೆ, ಅವರ ಸಾಮಾಗ್ರಿ, ಸಲಕರಣೆಗಳು ಅಟ್ಟವನ್ನೊ, ವಸ್ತುಸಂಗ್ರಹಾಲಯವನ್ನೊ ಸೇರಿವೆ.

ಇಂತಹ ಸಂದರ್ಭದಲ್ಲಿ ಪ್ರಾದೇಶಿಕತೆಯ, ಐತಿಹಾಸಿಕತೆಯ ನಂಬಿಕೆ ಶ್ರದ್ಧೆಗಳನ್ನು ಗುರುತಿಸಿ ಕನಿಷ್ಠ ದಾಖಲಿಸುವ ಕೆಲಸ ಆಗಬೇಕಾಗಿದೆ. ಬೆಲೆಕಟ್ಟಲಾಗದ ಬದುಕನ್ನು ಸ್ಥಿರೀಕರಿಸುವ ಪ್ರಯತ್ನಗಳು ನಮ್ಮ ಮುಂದಿವೆ. ಎಚ್.ಎಲ್.ನಾಗೇಗೌಡರು ತಮ್ಮ 'ಸೊನ್ನೆಯಿಂದ ಸೊನ್ನೆಗೆ' ಕೃತಿಯಲ್ಲಿ ಇಡೀ ಬಯಲುಸೀಮೆಯ ಬದುಕನ್ನು ವಸ್ತುಸಂಗ್ರಹಾಲಯದಲ್ಲಿ ಎತ್ತಿಟ್ಟಂತೆ ನಮ್ಮ ಮುಂದೆ ಇಡುತ್ತಾರೆ. ಇಂತಹ ಗ್ರಾಮೀಣರ ಭಾಷಾವೈಶಿಷ್ಟ್ಯವನ್ನು, ಶಬ್ದಕೋಶದ ಮೂಲಕ ಅರಿಯುವ ಅವರ ಸಾಧನ ಸಲಕರಣೆಗಳನ್ನು ವಸ್ತುಸಂಗ್ರಹಾಲಯದಲ್ಲಿ, ಚಿತ್ರಗಳಲ್ಲಿ ಕಾಣುವ ಸ್ಥಿತಿಗೆ ಬಂದಿರುವುದು ನಮ್ಮ ದುರ್ದೈವವೇ ಸರಿ. ಹಾಗಿದ್ದೂ ಇಲ್ಲಿ 'ಜಾನಪದೀಯ ಅಧ್ಯಯನ'ದ ಮೂಲಕ ಪ್ರಾದೇಶಿಕ ವೈಶಿಷ್ಟ್ಯ ಮತ್ತು ಭಿನ್ನತೆಯನ್ನು ಅರಿತು ಜನಪದರ ಪುಟ್ಟ ಪ್ರಪಂಚವನ್ನು ತೆರೆದಿಡುವ ಪ್ರಯತ್ನ ಮಾಡಲಾಗಿದೆ.

--

# ಉತ್ಸವ, ಆಚರಣೆಗಳ ಉಪಕರಣಗಳು



# ಗೃಹೋಪಯೋಗಿ ವಸ್ತುಗಳು



# ಆಭರಣಗಳು



ತಾಲಿ / ಮಾಂಗಲ್ಯ



ನಾಗರು

ಡಾಬು






ಕಿವಿಯಾಭರಣಗಳು



ಕಡಗ

# ಕಮ್ಮಾರಿಕೆ (ಕುಲುಮೆ ಕೊಟ್ಟಿಗೆ) ಮತ್ತು ಕೃಷಿ ಸಲಕರಣೆಗಳು






# ಕೃಷಿ ಸಲಕರಣೆಗಳು









## ಕೃಷಿ ಸಲಕರಣೆಗಳು



# ಪ್ರಾದೇಶಿಕ ಪದಕೋಶಕ್ಕೆ ಮೊದಲು

ಜನಪದರ ಶಬ್ದಸಾಗರ ವರ್ಣನಾತೀತವಾದುದು. ನಾಗರಿಕತೆಯ ಗಾಳಿ ಬೀಸಿದಂತೆ ಅವರ ಭಾಷಾಶೈಲಿ, ವೈವಿಧ್ಯದಲ್ಲಿ ಏರುಪೇರಾಗಿರುವುದು ಅರಿವಿಗೆ ಬಂದಿರುವ ವಿಷಯವಾಗಿದೆ. ಈ ಸಂಗತಿಯನ್ನು ಅರಿತು ಕೃತಿಕಾರರಾದ ಎಚ್.ಎಲ್.ಎನ್. ಅವರು ಕಾದಂಬರಿಯ ಕಡೆಯಲ್ಲಿ 'ಟಿಪ್ಪಣಿಗಳು' ಎಂಬ ಶೀರ್ಷಿಕೆಯಡಿ ಹಲವಾರು ಶಬ್ದಗಳಿಗೆ ಅರ್ಥನೀಡಿ ಉಪಕಾರ ಮಾಡಿದ್ದಾರೆ. ಪ್ರಸ್ತುತ ಈ ನಿಬಂಧದಲ್ಲಿ ಕೃತಿಯಲ್ಲಿನ ಆ ಪದಗಳನ್ನು ಹೊರತುಪಡಿಸಿ ಕೆಲವು ಪ್ರಾದೇಶಿಕ ಪದಗಳ ಅರ್ಥವನ್ನು ಪಟ್ಟಿ ಮಾಡಲಾಗಿದೆ.

೧. ಅಟ್ಟಣೆ – ಹುಲ್ಲುಮೆದೆಗೆ ಗೆದ್ದಲು ಹತ್ತದಂತೆ ಕಲ್ಲುಗಳನ್ನಿಟ್ಟು ಅದರ ಮೇಲೆ ಗಳುಗಳನ್ನು ಹಾಕಿ ನಿರ್ಮಿಸಿದ ಕಡಿಮೆ ಎತ್ತರದ ವೇದಿಕೆ.

೨. ಅಡ್ಡಿಕೆ – ಒಂದು ಬಗೆಯ ಸರ

೩. ಎಡಗುಸಾಣ – ಎಡಗೊಡಲಿ – ಮಧ್ಯಮ ತರದ, ಸುಮಾರಾದ ಗುಡಾಣ, ಮಧ್ಯಮತರದ ಕೊಡಲಿ

೪. ಉತ್ರಾಸ – ಬಾಗಿಲು ಚೌಕಟ್ಟಿನ ಒಳಗಡೆ ಮುಂಚಾಚಿದ ಮೇಲುಭಾಗ – ಗಂಧವಟ್ಟಿಗೆ, ಬಾಗಿಲು ಚೌಕಟ್ಟಿನ ಕೆಳಪಟ್ಟಿ – ಉತ್ರಾಸದಲ್ಲಿ ಮಲ್ಲೇಗೌಡರು ಒಳ್ಳೆ ಗಟ್ಟಿ ಅರದಿಂದ ಮಾಡಿಸಿಟ್ಟಿದ್ದ ಮಚ್ಚು ಕಾಣಿಸಿತು (ಸೊ.ಸೊ. ೧೯೪).

೫. ಎತ್ತೊಲೆ – ಎತ್ತಿ ಇಡಬಹುದಾದ ಒಲೆ: ಮಣ್ಣಿನಿಂದ ಮಾಡಿದ ವೃತ್ತಾಕಾರದ ಅಗಲವಾದ ಬಾಯುಳ್ಳ ಸುಮಾರು ಒಂಭತ್ತು ಅಂಗುಲ ಎತ್ತರದ ಒಲೆ.

೬. ಕವಣೆ – ಕಲ್ಲನ್ನು ಬೀಸಿ ಹೊಡೆಯುವುದಕ್ಕಾಗಿ ಹುರಿಯಿಂದ ಹೆಣೆದು ಮಾಡಿದ ಸಾಧನ. ಕವಣೆ ಬೀಸುವ ಪಂದ್ಯ, ಚೆಂಡಾಟ... (ಸೊ.ಸೊ. ಪು. ೧೧)

೭. ಕಿಮ್ಮೊಳಿ – ಅಂದಗೇಡಿ; ಕುರೂಪಿ – ನೀ ಸುಮ್ಮಕಿರು ಕಿಮ್ಮೊಳಿ ತಲೆಮ್ಯಾಲೆ ದೇವರು ಹೊರಿಸ್ದಂಗಾಯ್ತದೆ... ಎಂದು ಬಿಟ್ಟರು (ಸೊ.ಸೊ. ಪು. ೧೬೯)

೮. ಕರೆಗಡಿಗೆ – ಹಾಲು ಕರೆಯಲು ಬಳಸುವ ಮಣ್ಣಿನ ಸಣ್ಣ ಪಾತ್ರೆ.

೯. ಕೈಮುರಿ – ಗಂಡಸರು ಕೈಗೆ ತೊಡುವ ಬೆಳ್ಳಿಯ ಬಳೆ – ಅವನ ಕೈಮುರಿ ಒಂದು ಮುಂಗೈ ಗಾತ್ರ... (ಸೊ.ಸೊ. ಪು. ೧೪)

೧೦. ಕೊಂಡಮಾವು – ಒಂದು ಬಗೆಯ ಮರ. ಸಾಮಾನ್ಯವಾಗಿ ಇದರ ಮೇಲೆ ಮಲ್ಲಿಗೆ ಬಳ್ಳಿಯನ್ನು ಹಬ್ಬಿಸುತ್ತಾರೆ. ಇದರ ಪತ್ರೆಯನ್ನು ದೇವರಿಗೆ ಮುಡಿಸುತ್ತಾರೆ.

| | | | |
|---|---|---|---|
| ೧೧. | ಗಟ್ಟಿ | – | ಕೈಮುರಿ... ಗೌಡರ ಮುಂಗೈಯಲ್ಲಿ ಮೆರೆಯುತ್ತಿದ್ದ ಗಟ್ಟಿ......... ಇರಲಿಲ್ಲ (ಸೊ.ಸೊ. ಪು. ೧೮೧) |
| ೧೨. | ಬಂಟಿ | – | ಕಿವಿಯ ಆಭರಣ; ಹತ್ತ ಕಡುಕು. ಒಂದೇ ಹರಳು ಇಟ್ಟು ಕಿವಿಯೊಲೆಗೆ ಹತ್ತಿಕೊಂಡಂತೆ ಇರುವ ಉಂಗುರದಂತಹ ಓಲೆ. |
| ೧೩. | ಗೊಬ್ಬರಗಾಲು | – | ಒಳ್ಳೆಯ ಕಾಲು. ಸಮೃದ್ಧಿ ತರುವಂಥ ಕಾಲು. ಗೌಡರದು ಗೊಬ್ಬರಗಾಲು (ಸೊ.ಸೊ. ಪು. ೧೬೯) |
| ೧೪. | ಕೆಂಬೊರೆ | – | ಕೆಂಪುಮಣ್ಣಿನ ದಿನ್ನೆ, ಕೆಮ್ಮಣ್ಣಿನ ದಿಬ್ಬ – ಹೊಲದ ಇನ್ನೊಂದು ಕಡೆ ಕೆಂಬೋರೆಯ ಕಂಟದಲ್ಲಿ... ಸಾಗಿದ (ಸೊ.ಸೊ. ಪು. ೬೧) |
| ೧೫. | ಕೆಂಬಟ್ಟೆರೋಗ | – | ಪೈರುಪಚ್ಚೆಗೆ ಬರುವ ಒಂದು ಬಗೆಯ ರೋಗ. ಮಳೆ ಹೆಚ್ಚಾದ ವರ್ಷ ಪೈರೆಲ್ಲ ಕೆಂಬಟ್ಟೆ ರೋಗದಂತೆ ನಾತುಕೊಂಡು ಬೆಳೆಯುಕಿತ್ತು (ಪು. ೩೮) |
| ೧೬. | ಕುಲವಾಡಿ | – | ಗ್ರಾಮದಸೇವಕ: ಸುದ್ದಿಮುಟ್ಟಿಸುವವ – ಯಾರನ್ನಾದರೂ ಕರೆತರುವ ಆಳು ತೋಟಿತನ ಅಥವಾ ಕುಲವಾಡಿಕೆ ಕೆಲಸ. ಆ ಕಾಲಕ್ಕೆ ನೀಚಕೆಲಸ ಎಂದು... ಭಾವಿಸಿರಲಿಲ್ಲ (ಸೊ.ಸೊ. ಪು. ೯೫) |
| ೧೭. | ಗುನಿದೊಣ್ಣೆ | – | ಗುನಿಯನ್ನು ಬಡಿದು ಕಾಳನ್ನು ಬೇರ್ಪಡಿಸಲು ಬಳಸುವ ದಪ್ಪದೊಣ್ಣೆ. ಗುನಿ ಎಂದರೆ – ಬಡಿದಾಗ ಕಾಳು ಬೀಳದೆ ಇರುವ ರಾಗಿ, ಜೋಳ, ತೆನೆಗಳ ಭಾಗ, ಇಲುಕು – ಇದು ತೆನೆಯೂ ಅಲ್ಲದ ಕಾಳೂ ಆಗಿರದ ಮಧ್ಯಮಸ್ಥಿತಿ. |
| ೧೮. | ಬಾನ | – | ಬೋನ – ಬಾನ; ಅನ್ನ, ಅನ್ನದ ಎಡೆ – ಪೂಜಿಸಿದ್ದ ಒಂದೇ ಒಂದು ಬಾನವನ್ನು ಹಾದುಬಿಟ್ಟರು (ಸೊ.ಸೊ. ಪು. ೨೧೮) |
| ೧೯. | ಪಾವುಗೋಳಿ | – | ಕನ್ನಗೋಳಿ – ಇನ್ನೂ ಮೊಟ್ಟೆಯಿಡದಿರುವ ಕೋಳಿ – ನಾಲ್ಕಾರು ಪಾವುಗೋಳಿ... ಕೊಟ್ಟು ಮನ–ವೊಲಿಸಿಕೊಂಡರು (ಸೊ.ಸೊ. ಪು. ೧೧೧) |
| ೨೦. | ಬೆಟ್ಟಕುಡಲು | – | ಒಂದು ಬಗೆಯ ದೊಡ್ಡ ಕುಡಗೋಲು. |
| ೨೧. | ನಾಣ್ಯವಾಗಿ | – | ಸೊಗಸಾಗಿ, ಚೆನ್ನಾಗಿ – ಸ್ವಲ್ಪ ನಾಣ್ಯವಾಗಿ ಬಂದಾಗಿ ಮಾಡು (ಸೊ.ಸೊ. ಪು. ೧೧೦). |
| ೨೨. | ತೆತ್ತೇಸು | – | ಸೇರು, ಗುಂಪುಗೂಡು – ಆ ದಿನ ಊರಿನ ಜನರೆಲ್ಲ ಅವನ ಮುಖ ನೋಡಿಕೊಂಡು ಬರಬೇಕೆಂದು ತೆತ್ತೇಸಿ ನಿಂತುಕೊಂಡಿದ್ದರು(ಸೊ.ಸೊ. ಪು. ೧೦೫) |

| | | | |
|---|---|---|---|
| ೨೩. | ಸವಾರಿ ಕುಕ್ಕೆ | – | ಪ್ರಯಾಣಬುಟ್ಟಿ – ಬಿದಿರಿನ ಮುಚ್ಚಳವಿರುವ ಇದರಲ್ಲಿ ಅಡುಗೆ ಪಾತ್ರೆ ಪಗಡಿ ಇಡುತ್ತಾರೆ. ಇದನ್ನು ಗಾಡಿಯ ಅಡಿಯಲ್ಲಿ ಕಟ್ಟಿರುತ್ತಿದ್ದರು (ಸೊ.ಸೊ. ಪು. ೧೨೮) |
| ೨೪. | ಮೊಗೆ | – | ನೀರು ಮೊದಲಾದವನ್ನು ತುಂಬಿಕೊಳ್ಳಲು ಬಳಸುವ ಚೆಂಬಿನ ಆಕಾರದ ಮಣ್ಣಿನ ಪಾತ್ರೆ (ಸೊ.ಸೊ. ಪು. ೧೨೮) |
| ೨೫. | ದಳಮಾಡು | – | ಜ್ವಾಲೆ ಅಥವಾ ಉರಿಯನ್ನು ಹೆಚ್ಚುಮಾಡು. |
| ೨೬. | ಚಕಮಕಿಕಲ್ಲು | – | ಬೆಂಕಿ ಹೊತ್ತಿಸಲು ಬಳಸುವ ಕಲ್ಲು – ಬೆಣಚುಕಲ್ಲು (ಸೊ.ಸೊ. ಪು. ೩೨) |
| ೨೭. | ದೂದಿ | – | ಬೂರುಗದ ಹತ್ತಿ – ಚಕಮಕಿಯಿಂದ ಹೊರಟ ಕಿಡಿಯನ್ನು ಹಿಡಿದುಕೊಳ್ಳುವ ಹತ್ತಿ (ಸೊ.ಸೊ. ಪು. ೩೨) |
| ೨೮. | ದಬ್ಬೆಗುಳ | – | ನೇಗಿಲಿಗೆ ತೊಡಿಸುವ ಅಗಲವಾದ ಕುಳ – ಇದನ್ನು ತೊಡಿಸಿದರೆ ನೇಗಿಲಿನ ಮರ ಸವೆಯುವುದಿಲ್ಲ (ಸೊ.ಸೊ. ಪು. ೧೦೯) |
| ೨೯. | ಸೋಮ | – | ಗ್ರಾಮದೇವತೆಯ ಬಂಟ, ಅಂಗರಕ್ಷಕ – ಇದೊಂದು ಮರದ ಮುಖವಾಡ (ಸೊ.ಸೊ. ಪು. ೧೩೫) |
| ೩೦. | ಹಡ್ಡೆ | – | ಹೆಗಲಮೇಲೆ ಹೊರುವುದಕ್ಕಾಗಿ ಬಿದಿರು ದಬ್ಬೆಗಳಿಂದ ಮಾಡಿದ ಸಾಧನ – ಮೆರೆದೇವರನ್ನು ಅಲಂಕಾರಮಾಡಿ ಹಡ್ಡೆಗಳ ಮೇಲೆ ಹೊತ್ತುಕೊಂಡು ಮೆರೆಸುತ್ತಾರೆ. (ಪು. ೧೩೪) |
| ೩೧. | ಚಂದ್ರಮುರಾವು | – | ಅರ್ಧಚಂದ್ರಾಕೃತಿಯ ಕಿವಿಯ ಆಭರಣ. – ಮುರಾವು – ಇದನ್ನು ಕಿವಿಯ ಮೇಲ್ಭಾಗದಲ್ಲಿ ಧರಿಸುತ್ತಿದ್ದರು – ಕಿವಿಗೆ ಚಂದ್ರಮುರಾವನ್ನು ಹಾಕಿಕೊಂಡಿದ್ದನು... (ಸೊ.ಸೊ. ಪು. ೧೪) |
| ೩೨. | ತಳಿ | – | ಚಿಮುಕಿಸು, ಸಿಂಪಡಿಸು – ಹಸುವಿನ ಗಂಜಳವನ್ನು ಮನೆಗೆಲ್ಲ ತಳಿದಳು (ಸೊ.ಸೊ. ಪು. ೧೭೮) |
| ೩೩. | ಬಿಚ್ಚೋಲೆ | – | ಮುತ್ತೈದೆಯರು ಕಿವಿಗೆ ಆಭರಣದಂತೆ ಧರಿಸುತ್ತಿದ್ದ ಬಿಳಿ ಅಥವಾ ಕೆಂಪು ತಾಳೆಗರಿಯ ಸುರುಳಿ. |
| ೩೪. | ಭವನಾಸಿ | – | ದಾಸರು ಬಳಸುವ ಒಂದು ಬಗೆಯ ಭಿಕ್ಷಾಪಾತ್ರೆ. ಇದನ್ನು ಸಾಮಾನ್ಯವಾಗಿ ತಾಮ್ರ ಅಥವಾ ಹಿತ್ತಾಳೆಯಿಂದ ಮಾಡಿರುತ್ತಾರೆ. |

೩೫. ಶಿಶುಮಗನೆ – ಶಿಷ್ಯಮಗ – ಇದೊಂದು ಪ್ರೀತಿಯ ಸಂಬೋಧನೆ (ಸೊ.ಸೊ. ಪು. ೩)

೩೬. ನಾಗರು – ನಾಗದೇವತೆಯ ಪ್ರತಿಮೆಯನ್ನು ಕೆತ್ತಿರುವ ಆಭರಣ. ಇದನ್ನು ಹೆಂಗಸರು ತಲೆಯ ಹಿಂಭಾಗದಲ್ಲಿ ಕೂದಲಿಗೆ ಸೇರಿಸಿ ಧರಿಸಿಕೊಳ್ಳುವರು – ನಾಗರು ಹಾಕಿಕೊಳ್ಳಬೇಕೆಂಬ ಆಸೆ ಆಕೆಗೆ... (ಸೊ.ಸೊ. ಪು. ೧೬೯)

೩೭. ಅಳಿಗೂಳು – ಹೊಸದಾಗಿ ಮದುವೆಯಾದ ಅಳಿಯನಿಗೆ ನೀಡುವ ಔತಣ – ಅಳಿಯೂಟ – ಮದುವೆಯಾದ ವರ್ಷ ತುಂಬುವುದರೊಳಗೆ ಹಲವು ಬಾರಿ ಅಳಿಯನನ್ನು ಕರೆತಂದು ಬಗೆಬಗೆಯ ಅಡುಗೆ ಮಾಡಿಸಿ, ಇಕ್ಕುವ ಸಂಪ್ರದಾಯ ಎಲ್ಲೆಡೆ ಇದೆ (ಸೊ.ಸೊ. ಪು. ೩೯) ಹೆಂಡ್ತಿ ಸತ್ತ ಮೇಲೆ ಅಳಿಗೂಳಿಗೆ ಹೋದಂಗೆ (ಗಾದೆ)

೩೮. ಅರೆಕೋಲು – ಅರೆಕಾಲು, ಗಾಡಿಯ ಚಕ್ರದ ಕಾಲು.

೩೯. ಇರುಳಿಗ – ಇಳ್ಳಿಗ, ಇಳ್ಳುಗ – ಒಂದು ಬುಡಕಟ್ಟಿನ ಜನಾಂಗಕ್ಕೆ ಸೇರಿದ ವ್ಯಕ್ತಿ.

೪೦. ಮೈಚುಳ್ಳಿಸು – ದೇಹವನ್ನು ಕಂಪಸು, ನಡುಗಿಸು – ಎತ್ತು ಮೈಚುಳ್ಳಿಸಿದರೆ ಅಲ್ಲೇನೋ ಕಡದದೆ ಅಂತ... ತಿಳಕೋಬೇಕು... (ಸೊ.ಸೊ. ಪು. ೧೦೬)

೪೧. ಚಾಳೀಸು – ಚಾಳೀಸು. ಸು. ೪೦ನೇ ವಯಸ್ಸಿನ ನಂತರ ಉಂಟಾಗುವ ದೃಷ್ಟಿಮಾಂದ್ಯ. ಅದೇನು ಮಹಾ ಓದಾವ ಅಂದ್ರೆ ಚಾಳೀಸು ಬ್ಯಾರೆ (ಸೊ.ಸೊ. ಪು. ೨೧೧).

೪೨. ಸೀರಣಿಗೆ – ಚೀರಣಿಗೆ, ಹೇನಿನ ಮೊಟ್ಟೆಯನ್ನು ಕೂದಲಿನಿಂದ ಬಾಚಿ ತೆಗೆಯಲು ಬಳಸುವ ಮರದ ಹಣಿಗೆ.

೪೩. ಮದನಗೂಳು – ಮದುವಣಿಗನಿಗೆ ನೀಡುವ ಊಟ – ಹಬ್ಬ ಹರಿದಿನ, ತಿಥಿ ಮದನಗೂಳು ಮರೆಯುತ್ತಿರಲಿಲ್ಲ.

೪೪. ಕೊಡವೆ – ಕೂಳಿ, ಮೀನುಹಿಡಿಯುವ ಸಾಧನ. ಬಿದಿರುಕಟ್ಟೆ ತೆಂಗಿನಗರಿಯ ಕಡ್ಡಿಗಳಿಂದ ಮಾಡಿದ್ದು – ಇದನ್ನು ಹರಿವ ನೀರಿಗೆ ಎದುರಾಗಿ ಒಡ್ಡಿದರೆ ಮೀನುಗಳು ಬೀಳುತ್ತವೆ (ಸೊ.ಸೊ. ಪು. ೮೫)

––

## ಪರಾಮರ್ಶನ ಗ್ರಂಥಗಳು


೧. ಸೊನ್ನೆಯಿಂದ ಸೊನ್ನೆಗೆ – ಸಾಹಿತ್ಯ ಸದನ ಪ್ರಕಾಶನ, ಎರಡನೆ ಮುದ್ರಣ, ೧೯೭೮

೨. ಜಾನಪದ ಸ್ವರೂಪ – ಹಾ.ಮಾ.ನಾಯಕ, ೧೯೭೧

೩. ನನ್ನೂರು – ಎಚ್.ಎಲ್.ನಾಗೇಗೌಡ

೪. ಜಾನಪದ : ಸ್ವರೂಪ ಮತ್ತು ಸಾಹಿತ್ಯ : ಪ್ರೊ. ಡಿ.ಲಿಂಗಯ್ಯ, ಡಾ. ಕೆ.ಆರ್. ಸಂಧ್ಯಾರೆಡ್ಡಿ, ೨೦೦೬, ಕನ್ನಡ ಸಾಹಿತ್ಯ ಪರಿಷತ್ತು.

೫. ಜನಪದ ಸಾಹಿತ್ಯ – ಕಾಳೇಗೌಡ ನಾಗವಾರ, ೧೯೯೬, ಯುಗಾದಿ ಪ್ರಕಾಶನ

೬. ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು – ಜೀ.ಶಂ.ಪರಮಶಿವಯ್ಯ, ೧೯೭೯

೭. ಜಾನಪದ – ಕೆಲವು ವಿಚಾರಗಳು (ಎರಡನೆ ಮುದ್ರಣ), ೧೯೯೬, ಅಂಬಳಿಕೆ ಹಿರಿಯಣ್ಣ

೮. ಕನ್ನಡ ಶಿಷ್ಟ ಸಾಹಿತ್ಯದಲ್ಲಿ ಜಾನಪದ – ವಿವಿಧ ಲೇಖಕರು – ಪ್ರಧಾನ ಸಂಪಾದಕರು – ಬರಗೂರು ರಾಮಚಂದ್ರಪ್ಪ.

೯. ಕನ್ನಡ ಜಾನಪದ ವಿಶ್ವಕೋಶ, ಪ್ರಧಾನ ಸಂಪಾದಕರು – ಚಂದ್ರಶೇಖರ ಕಂಬಾರ, ಸಂಪುಟ –೧, ಸಾಹಿತ್ಯ ಪರಿಷತ್ತು, ೧೯೮೫.

೧೦. ಕನ್ನಡ ಜಾನಪದ ವಿಷಯ ವಿಶ್ವಕೋಶ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ೨೦೦೬, ಪ್ರಧಾನ ಸಂಪಾದಕರು, ಅರವಿಂದ ಮಾಲಗತ್ತಿ.

೧೧. ನಾಗಸಂಪದ – ಸಂಪಾದಕ: ಡಾ. ಚಕ್ಕೆರೆ ಶಿವಶಂಕರ್, ಕರ್ನಾಟಕ ಜಾನಪದ ಪರಿಷತ್ತು, ೨೦೦೧.

೧೨. ಸಾಲುದೀಪಗಳು – ಸಂ. ಜಿ.ಎಸ್.ಸಿದ್ದಲಿಂಗಯ್ಯ : ಎಂ.ಎಚ್. ಕೃಷ್ಣಯ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಮೂರನೆಯ ಮುದ್ರಣ, ೨೦೦೧

೧೩. ನಾಗವಲ್ಲಿ – ಸಂಪಾದಕರು: ಜೀ.ಶಂ.ಪ, ಹ.ಕ.ರಾ. ಮತ್ತು ಪ್ರ.ಗು. ಸನ್ಮಾನ ಸಮಿತಿ, ಚಾಮರಾಜಪೇಟೆ, ಬೆಂಗಳೂರು, ಪ್ರಥಮ ಮುದ್ರಣ, ೧೯೭೯.

೧೪. ನಮ್ಮ ಸುತ್ತಿನ ಗಾದೆಗಳು – ಲೇ: ಸುಧಾಕರ : ಪ್ರತಿಭಾ ಪ್ರಕಾಶನ, ಎರಡನೇ ಮುದ್ರಣ, ೧೯೮೭.

೧೫. ಕನ್ನಡ ಜಾನಪದ ಕೋಶ – ಪ್ರಧಾನ ಸಂಪಾದಕರು: ಡಾ. ಎಚ್.ಎಲ್.ನಾಗೇಗೌಡ, ಮೊದಲ ಮುದ್ರಣ, ೧೯೯೮, ಪ್ರಕಾಶಕರು: ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.


****

